# ಅನ್ವೇಷಣೆ

ಸಾಹಿತ್ಯ ಸಾಂಸ್ಕೃತಿಕ ಪತ್ರಿಕೆ

ಸಂಚಿಕೆ 36

ಬೆಲೆ ರೂ. 5/-



ಕಲೆ : ಪಿಕಾಸೋ (ಕೃಪೆ : ಕರ್ನಾಟಕ ಲಲಿತಕಲಾ ಅಕಾಡೆಮಿ)

ಈ ಸಂಚಿಕೆಯಲ್ಲಿ :

1 ಡಾ॥ ಯ—ಆರ್. ಲಕ್ಷ್ಮೀನಾರಾಯಣ—ಡಾ॥ ನಾ॥ ಮೊಗಸಾಲೆ—ನಜೀರ್ ಚಂದಾವರ-
ಸಮ್ಮ... ವಾಲೀಕಾರ —ಸುಬ್ರಾಯ ಮತ್ತಿಹಳ್ಳಿ —ವಿದ್ಯಾ ಭರತನಹಳ್ಳಿ —ಬಂದಗದ್ದೆ
...ಶೆಗಳು : ...ಲೇಂದ್ರ ಬಂದಗದ್ದೆ — ಎಲ್. ಎನ್. ಮುಕುಂದರಾಜ್ — ಶಂಕರಗೌಡ
... ...ಭಾವತಿ

ಪ್ರಗತಿಪರ ವಿಚಾರಗಳಿಗೆ

# ಅನ್ವೇಷಣೆ

ಸಾಂಸ್ಕೃತಿಕ ಚಟುವಟಿಕೆಗಳಿಗೆ

ಸಂಪುಟ : 6 ಜನವರಿ-ಫೆಬ್ರವರಿ 90 ಸಂಚಿಕೆ: 36

ಸಂಪಾದಕ

ಆರ್. ಜಿ. ಹಳ್ಳಿ ನಾಗರಾಜ್

ಸಂಪಾದಕ ಮಂಡಳಿ

ಸರಜೂ ಕಾಟಕರ

ನಜೀರ ಚಂದಾವರ

ಬಿ.ಎನ್.ಮಲ್ಲೇಶ್

ಎಚ್.ಎಲ್.ಪುಷ್ಪ

- 'ಅನ್ವೇಷಣೆ' ಸಾಹಿತ್ಯ – ಸಾಂಸ್ಕೃತಿಕ ಚಟುವಟಿಕೆಗಳಿಗೆ ಮೀಸಲಾದ ದ್ವೈಮಾಸಿಕ.
- ಪ್ರಕಟಣೆಗೆ ಕಳುಹಿಸುವ ಲೇಖನ ವಿಮರ್ಶಾ ಬರಹ. ಕವನಗಳನ್ನು ಆದಷ್ಟು ಟೈಪ್ ಮಾಡಿ ಕಳುಹಿಸಿ.
- ಅಪ್ರಕಟಿತ ಬರಹ ವಾಪಸ್ಸು ಬೇಕಿದ್ದರೆ ಸಾಕಷ್ಟು ಅಂಚೆ ಚೀಟಿ ಇರಿಸಿ.
- ವಿಳಾಸ ಬದಲಾದರೆ ದಯವಿಟ್ಟು ತಿಳಿಸಿ
- ಚಂದಾ ಹಣವನ್ನು M.O. ಇಲ್ಲವೆ D.D. ಮೂಲಕ ಕಳುಹಿಸಿ. ಚೆಕ್ ಕಳುಹಿಸುವಾಗ ರೂ. 5 ಹೆಚ್ಚು ಕಳುಹಿಸಿ.
- ವಾ. ಚಂದಾ ರೂ. 35 (ವ್ಯಕ್ತಿಗಳಿಗೆ) ರೂ. 50 (ಸಂಸ್ಥೆ ಮತ್ತು ಗ್ರಂಥಾಲಯ) 3 ವರ್ಷಕ್ಕೆ ರೂ. 100 (ವ್ಯಕ್ತಿಗಳಿಗೆ) ಅಜೀವ ರೂ. 400 (ವ್ಯಕ್ತಿಗಳಿಗೆ) ರೂ. 500 (ಸಂಸ್ಥೆ/ಗ್ರಂಥಾಲಯಗಳಿಗೆ)

ಸಂಪರ್ಕ ವಿಳಾಸ

ಸಂಪಾದಕ, "ಅನ್ವೇಷಣೆ"
478, 11ನೇ ಎಂ. ಸಿ. ಬಡಾವಣೆ ರಸ್ತೆ,
ವಿಜಯನಗರ, ಬೆಂಗಳೂರು 560 040.

# ಎಂ. ಎನ್. ರಾಯ್, ಅಕಾಡೆಮಿ 88ರ ವಿಮರ್ಶೆ....

ಮಾನವತಾವಾದಿ ಎಂ. ಎನ್. ರಾಯ್ ಜನ್ಮ ಶತಾಬ್ದಿ ಎರಡು ವರ್ಷಗಳ ಹಿಂದೆ ನಗರದಲ್ಲಿ ನಡೆದಾಗ ರಾಯ್ ಕುರಿತು ಹೆಚ್ಚು ವಿಚಾರಗಳ ತಿಳಿದುಕೊಳ್ಳಲು ಸಹಾಯಕವಾಯಿತು. ಜನ್ಮ ಶತಾಬ್ದಿಯ ಪೂರ್ವಭಾವಿ ಸಿದ್ಧತೆಗಳು ನಡೆಯುವಾಗ ಅಂಥ ಸಭೆಯಲ್ಲಿ ಭಾಗವಹಿಸಲು ನನಗೂ ಕರೆ ಬಂದಿತ್ತು. ಒಂದೆರಡು ಸಭೆಗೆ ಹೋಗಿದ್ದೆ. ವೈಯಕ್ತಿಕ ತೊಂದರೆಗಳಿಂದ ಮುಂದಿನ ಸಭೆಗಳಲ್ಲಿ ಭಾಗವಹಿಸಲಾಗಲಿಲ್ಲ. ಮುಂದೆಯೂ ಈ ಮಾನವತಾವಾದಿಯ ಕುರಿತು ಚಿಂತನೆ ನಡೆಸುವ, ವಿಚಾರ ಪ್ರಚಾರ ಮಾಡುವ ಅಗತ್ಯಗಳಿವೆಯೆಂದು, ಆ ನಿಟ್ಟಿನಲ್ಲಿ ನಾವು ಪ್ರಾಮಾಣಿಕವಾಗಿ ಪ್ರಯತ್ನಿಸಬೇಕೆಂದು ಸಭೆಯಲ್ಲಿ ಹೇಳಿದ್ದ ನೆನಪು[1]. ನಿಜ ! ಈಗ ಆ ವಿಚಾರಗಳಷ್ಟೇ ನೆನಪು-ರಾಯ್ ಅವರಂತೆ. 'ರಾಯ್‌ಯಿಸ್ಟ್' ಅಂದುಕೊಂಡವರು ಸಕ್ರಿಯ ರಾಜಕಾರಣದಲ್ಲಿ ಮುಳುಗಿದ್ದರಿಂದ ಬಹುಶಃ ಅಂಥ ಪ್ರಚಾರ ಕಾರ್ಯದ ಆಲೋಚನೆ ರಾಜಕಾರಣಿಯ ವಿಚಾರವಷ್ಟೇ ಆಗಿದ್ದೂ ಪ್ರಚಾರ ಕಾರ್ಯ ಅಲ್ಲಿಗೆ ಮುಗಿಯಲು ಮತ್ತೊಂದು ಬಲವಾದ ಕಾರಣ ಆಗಿರಬಹುದು.

ಕಾರಣ ಏನೇ ಇದ್ದರೂ ರಾಯ್ ವಿಚಾರ ಕುರಿತು ಗಂಭೀರವಾಗಿ ಆಲೋಚಿಸುವ ಮಿತ್ರರು ಸಾಕಷ್ಟಿದ್ದಾರೆ. ಅವರ ವಿಚಾರಗಳ ದಾಖಲೆಗಳನ್ನು ಕೆದಕಿ, ತಾವು ಅಭ್ಯಾಸಿಸಿದ್ದನ್ನು ಬರೆದು "ಈ ವಿಚಾರ ಹೀಗೆ" ಎಂದು ತಿಳಿಸಿ, ಚರ್ಚಿಸುವರು ಸಿಕ್ಕುತ್ತಾರೆ. ಎಲ್ಲಾ ಕಾಲಕ್ಕೂ, ಎಲ್ಲಾ ಜನಾಂಗಕ್ಕೂ ಸರ್ವಸಮ್ಮತವಾಗುವ ವಿಚಾರಗಳನ್ನು ಯಾವ ವ್ಯಕ್ತಿಯೂ ಹೇಳಲು ಸಾಧ್ಯವಿಲ್ಲ. ಇಂಥ ವಿಚಾರ ಸಾಹಿತ್ಯಕ್ಕೂ ಅನ್ವಯಿಸುವುದರಿಂದ ಎಲ್ಲಾ ಕಾಲಕ್ಕೂ ಶ್ರೇಷ್ಠ ಅನ್ನುವ ಕೃತಿಯನ್ನು ನೀಡಲೂ ಸಾಧ್ಯವಿಲ್ಲ. ಕೃತಿಗಳಲ್ಲಿನ ಶ್ರೇಷ್ಠತೆಯನ್ನು (ಮೌಲ್ಯಮಾಪನವನ್ನು) ಕಾಲ ನಿರ್ಧರಿಸುತ್ತದೆಯೆಂಬಸರಳ ಸತ್ಯದೊಡನೆ ರಾಯ್ ವಿಚಾರಗಳನ್ನು ನಾವು ಒಪ್ಪಬೇಕಾಗುತ್ತದೆ

ಬೇಕೆಂದಾಗ ಎಲ್ಲೆಂದರಲ್ಲಿ ಸಿಕ್ಕದ ರಾಯ್ ಅವರ "Historical role of Islam" ಎಂಬ ಕೃತಿಯಲ್ಲಿನ-ವಿಚಾರಗಳು ಬಹಳಷ್ಟು ಜನರಿಗೆ ಅಪ್ರಿಯ ಆಗಬಹುದು. ಈ "ಅಪ್ರಿಯಂತೆ" ಬಹುಶಃ ಇವೊತ್ತಿನ ಸಂದರ್ಭದ ಮಾತಾಗಬಹುದು. ಇಸ್ಲಾಂ ಪರವಾದ ವಿಚಾರ ಕುರಿತು ಅದೂ ಭಾರತದಂಥ ಬಹು ಜನಾಂಗಗಳ ರಾಷ್ಟ್ರದಲ್ಲಿ ಇವೊತ್ತು ಮಾತಾಡುವುದು ಅಪರಾಧವಾಗಿ ಕಾಣುವ ಸನ್ನಿವೇಶದಲ್ಲಿ ರಾಯ್

---

* ಸಂಪಾದಕನ ಟಿಪ್ಪಣಿಗಳು

1 ಡಾ॥ ಯು. ಆರ್. ಅನಂತಮೂರ್ತಿ ಅವರ ಸಂಪಾದಕತ್ವದ 'ರುಜುವಾತು' ವಿಶೇಷ ಬರಹ ಸಮ್ಮೇ ಪ್ರಕಟಿಸುವ ಮೂಲಕ ಕೆಲವು ವಿಚಾರಗಳ ದಾಖಲೆ ಮಾಡಿದೆ. ಇದರ ಅತಿಥಿ ಸಂಪಾದಕರು : ಜಯಕುಮಾರ್ ಅನಗೋಳ.

ಹೇಳುವ.......ಭಾರತದ ಹಿಂದೂಗಳಿಗೆ ಇಸ್ಲಾಂ ಬಗ್ಗೆ ಇರುವ ಅಜ್ಞಾನ, ಮಹಮ್ಮದೀಯರ ಬಗ್ಗೆ ಇರಬಹುದಾದ ಅಪನಂಬಿಕೆ, ಅಸಹನೆ,ಅವಜ್ಞೆ, ದ್ವೇಷ, ತಿರಸ್ಕಾರದ ಭಾವನೆಗಳನ್ನು ಹೋಗಲಾಡಿಸುವುದರ ಜೊತೆಗೇ ಭಾರತದ ಮುಸ್ಲಿಮರಿಗೆ ತಮ್ಮ ಧರ್ಮದ ಬಗ್ಗೆ ಇರುವ ಅಜ್ಞಾನವನ್ನು ಹೋಗಲಾಡಿಸುವುದೂ ಅಗಿದೆ........2" ಇಂಥ ವಿಚಾರಗಳು ಯಾವುದೇ ಜನಾಂಗದ ಐತಿಹಾಸಿಕ ಹಿನ್ನೆಲೆಗಳನ್ನು ಪರಿಶೀಲಿಸುವಾಗ ಕುತೂಹಲಕಾರಿಯಾಗಿರುತ್ತವೆ. ಅವುಗಳನ್ನು ತಿಳಿದುಕೊಳ್ಳುವ ಮನಸ್ಸಿರಬೇಕು, ಅಷ್ಟೆ. ಈ ಲೇಖನ ಅಚ್ಚಿನ ಮನೆಗೆ ಹೋದ ದಿನ ಅಲ್ಲಿ ಕೊಂಚ ಪ್ರತಿಭಟನೆ ಎದುರಿಸಿದೆ, ಈ ಪ್ರತಿಭಟನೆಗೆ ಕಾರಣಗಳೂ ಇದ್ದವು. ಆ ದಿನ ಕಾಶ್ಮೀರದಲ್ಲಿ ಎಚ್. ಎಂ. ಟಿ. ಜನರಲ್ ಮೇನೇಜರ್ ಮತ್ತು ವಿಶ್ವವಿದ್ಯಾಲಯದ ಉಪಕುಲಪತಿ ಹಾಗೂ ಅವರ ಸಹಾಯಕನನ್ನು ಅಪಹರಿಸಿ ಗುಂಡಿಟ್ಟು ಕೊಲ್ಲಲಾಗಿತ್ತು. ಯಾವುದೋ ಭಾವನಾತ್ಮಕ ಸಂಬಂಧದಲ್ಲಿ ಮಾನವೀಯತೆಗೆ ಬೆಲೆ ಇಲ್ಲದಂಥ ಸಂದರ್ಭನನ್ನೂ ಒಳಗೊಂಡು ಹಲವರಿಗೆ ವೇದನೆಯನ್ನುಂಟು ಮಾಡಿದ್ದು ನಿಜ. "ಇಡೀ ಲೇಖನವನ್ನು ಓದಿ ಈ ಕುರಿತು ಗಂಭೀರವಾಗಿ ಯೋಚಿಸಿ'' ಎಂದು ಅಚ್ಚಿನ ಮನೆಯ ಮಿತ್ರರಿಗೆ ತಿಳಿಸಿ, ಕೂತು ಓದಿದಾಗ ಅವರಲ್ಲಿದ್ದ ಪ್ರತಿಭಟನೆ ಕಾವು ತಣ್ಣಗಾಗಿತ್ತು. ಹಿಂದೂಗಳಲ್ಲಿನ ಮುಖ್ಯವಾಗಿ ಬ್ರಾಹ್ಮಣರ ಕುದಾಚಾರಗಳು, ವೈಯಕ್ತಿಕ ಕಲಹ, ಕುಟಿಲೋಪಾಯ, ಅಸಹನೆ, (ಓದಿ: ಪುಟ 26, 27, 28) ಹೇಗೆ ಧಾರ್ಮಿಕ ವಿಚಾರಗಳಿಗೆ ರಾಜಕೀಯ ಬಣ್ಣದ ಲೇಪನ ಆಯಿತೆಂಬುದನ್ನು ರಾಯ್ ಹೇಳುವಾಗ "ಚರ್ಚೆ ಇನ್ನೂ ಸಾಧ್ಯ" ಎಂಬ ತೀರ್ಮಾನಕ್ಕೆ ಬರಲಾಯಿತು. ಅದರಂತೆ ಗಂಭೀರ ಓದುಗರೂ ಇಂಥ ಚರ್ಚೆ ಸಾಧ್ಯವಿದ್ದರೆ ಚರ್ಚಿಸಲು ಪ್ರತಿಕ್ರಿಯಿಸಲು 'ಅನ್ವೇಷಣೆ' ವೇದಿಕೆ ಬಳಸಿಕೊಳ್ಳಬಹುದು. ಬರೆಯಿರಿ-

**ಸಾಹಿತ್ಯ ಅಕಾಡೆಮಿ 88ರ ವಿಮರ್ಶೆ**

ಡಾ॥ ಜಿ. ಎಸ್. ಶಿವರುದ್ರಪ್ಪನವರ ಅಧ್ಯಕ್ಷ ಅವಧಿಯ ಕರ್ನಾಟಕ ಸಾಹಿತ್ಯ ಅಕಾಡೆಮಿ ಸಾಧನೆಗಳು ಸಾಕಷ್ಟು ಉತ್ತಮವಾಗಿವೆ. ಈ ಉತ್ತಮ ಸಾಧನೆ ಅವರು ಯೋಜಿಸಿದ ವಿಚಾರ ಸಂಕಿರಣಗಳಲ್ಲಿ ಹಾಗೂ ಪ್ರಕಟಣೆಗಳಲ್ಲಿ ಕಾಣುತ್ತದೆ. ಆದರೆ ಈ ಪ್ರಕಟಣೆಗಳೆಲ್ಲಾ ದೋಷಮುಕ್ತವಾಗಿವೆಯೆಂದೇನೂ ಇಲ್ಲ. ಅಕಾಡೆಮಿ ಪ್ರಕಟಿಸುವ ವಾರ್ಷಿಕ ವಿಮರ್ಶೆ, ಕವನ, ಕಥಾಸಂಕಲನಗಳು ನೇಮಿಸಿದ ಸಂಪಾದಕನ ಧೋರಣೆ, ಅವನು ಒಪ್ಪಿದ ವಿಚಾರಗಳ ಅಡಿಯಲ್ಲಿ ಪ್ರಕಟವಾಗುತ್ತಿರುವುದು ನಿಜವಾದರೂ ; ಆಯ್ಕೆಯಲ್ಲಿ ಪ್ರಬಲ ಕೈವಾಡಗಳೂ ನಡೆವ ಗುಮಾನಿಗಳಿವೆ. ಅಂಥ ಒಂದು ಗುಮಾನಿಗೆ ಕಾರಣವಾದ 1983ರ "ಸಾಹಿತ್ಯ ವಿಮರ್ಶೆ" ಕುರಿತು ಕೆಲ ಮಾತುಗಳನ್ನಿಲ್ಲಿ ಹೇಳಬೇಕಿದೆ :

ಸಮಕಾಲೀನ ವಿಮರ್ಶೆಯ ಒಲವುಗಳ ಚರ್ಚೆಯಿಂದ ಸಾಹಿತ್ಯದೊಂದಿಗೆ ಸೃಷ್ಟಿಶೀಲವಾದ ಸಂವಾದವನ್ನು ಏರ್ಪಡಿಸುವ ಮತ್ತು "ನಿಯತ ಕಾಲಿಕಗಳಲ್ಲಿ ಪ್ರಕಟ

2. ಇದೇ ಸಂಚಿಕೆ ಪುಟ 18 ''ಇಸ್ಲಾಂ ಕುರಿತು ಎಂ. ಎನ್. ರಾಯ್ ಅವರ ವಿ

ವಾಗುವ ವಿಮರ್ಶೆ ಗ್ರಂಥಸ್ಥ ವಿಮರ್ಶೆಗಿಂತ ಕೊಂಚ ಭಿನ್ನವಾಗಿರಬೇಕು" ಎಂಬ ಆಶಯದೊಂದಿಗೆ ರಾಜೇಂದ್ರ ಚೆನ್ನಿ ಅವರು ಸಂಪಾದಿಸಿದ ಕೃತಿ ತಮ್ಮ ಆಶಯಕ್ಕೆ ಮತ್ತು ಅಕಾಡೆಮಿಯ ನಿಯಮಕ್ಕೆ ಬದ್ಧವಾಗಿ ಬಂದಿಡೆಯೆ? ಎಂಬ ಪ್ರಶ್ನೆ ಇದೆ. ಈ ಪ್ರಶ್ನೆಯೊಂದಿಗೆ ಈ ಕೃತಿಯಲ್ಲಿನ ಹಲವು ಬರಹಗಳು "ಗುಮಾನಿ" ವ್ಯಕ್ತಪಡಿಸು ವಂತಿವೆ. ಜೊತೆಗೆ ಕೆಲ ಲೇಖಕರಿಗೆ "ಅನಾವಶ್ಯಕ ಅವಕಾಶ" ಕೊಟ್ಟ ಬಗ್ಗೆ ಸುಳಿಹುಗಳಿವೆ.

ಉದಾ: ಪುಟ 100 ಮತ್ತು 118ರ ಎಚ್. ಎಸ್. ಶಿವಪ್ರಕಾಶ್ "ಫೆವರಿಸಮ್" ಬರಹಗಳು ಹಾಗೂ ಪುಟ 48 ಮತ್ತು 53ರ ಲೇಖನ (?)ಗಳು ಯಾ ಪ್ರಶ್ನೋತ್ತರಗಳು ಇಂಥ ಸಂಶಯದಿಂದ ಕೂಡಿವೆ. ಈ ಬರಹಗಳ ಕರ್ತೃಗಳು ನನಗೆ ಒಂದಲ್ಲಾ ಒಂದು ಕಾರಣಕ್ಕೆ ಪ್ರಿಯವಾದರೂ ಅಕಾಡೆಮಿಯಂಥ ಜವಾಬ್ದಾರಿ ಸಂಸ್ಥೆಯ ಪ್ರಕಟಣೆಯಲ್ಲಿ ಪವಾಡ ನಡೆವ ಬಗ್ಗೆ ನಿಮ್ಮಗಳ ಗಮನಕ್ಕೆ ತರುವುದು ಅನಿವಾರ್ಯವಾಗಿದೆ. ಓದಿ–"ಮೊದಲ ಪ್ರಶ್ನೆಗೆ ಉತ್ತರವನ್ನು ಆಧುನಿಕ ಸಾಹಿತ್ಯದ ಸಂದರ್ಭದಲ್ಲಿ ವಿವರಿಸಿಕೊಳ್ಳುವುದೇ ಹೆಚ್ಚು ಪ್ರಸ್ತುತವೆನಿಸುತ್ತದೆ"(ಪುಟ 53)

"4. ಬೇರೆ ದೇಶಗಳ ಪ್ರತಿಭಟನೆಯ ಸಾಹಿತ್ಯವನ್ನು ಹೆಚ್ಚು ತಿಳಿದಿಲ್ಲದ ನನಗೆ ಈ ಪ್ರಶ್ನೆಗೆ ಉತ್ತರ ಹೇಳುವುದು ಕಷ್ಟ ಕ್ಷಮಿಸಿ" (ಪುಟ 58)- ಎಂದಿದೆ.

ಒಬ್ಬ ಸಾಮಾನ್ಯ ಓದುಗ ಅಥವಾ ಗಂಭೀರ ಓದುಗ ಇಬ್ಬರಿಗೂ ಈ ಬರಹ ಕೊಡೋಣ. ಅವರ ತತ್‌ಕ್ಷಣದ ಪ್ರತಿಕ್ರಿಯೆ ಏನಿರಬಹುದು ?

(ಅ) ಇಲ್ಲಿ ಪ್ರಶ್ನೆಗಳೇ ಇಲ್ಲದೆ 1, 2, 3, 4, ಇತ್ಯಾದಿ ಹಂತದ ಉತ್ತರ ಗಳಿವೆ. ಅಂದರೆ ಯಾವುದೋ ನಿರ್ದಿಷ್ಟ ಉದ್ದೇಶದ ಪ್ರಶ್ನೋತ್ತರ ಮಾಲಿಕೆಯ ಉತ್ತರಗಳಿವು ಅಂದಥಾಯಿತು. ಹಾಗಾದರೆ ಪ್ರಶ್ನೆಗಳೆಲ್ಲಿ ಸ್ವಾಮಿ ? ನನ್ನಂಥವನು ಗಲಿಬಿಲಿಯಾಗುವುದೇ ಇಂಥ "ಬರೀ ಉತ್ತರ" ಕಂಡಾಗತಾನೆ?

(ಆ) ಸಾಹಿತ್ಯ ಚಳುವಳಿಗೋ, ಸಾಹಿತ್ಯ ಪರಂಪರೆಗೋ ಸಂಬಂಧಿಸಿದ ಪ್ರಶ್ನೆಗಳನ್ನು ಬಿಟ್ಟು ಬರೀ ಉತ್ತರಗಳ ಪ್ರಕಟಣೆ "ಸಾಹಿತ್ಯ ವಿಮರ್ಶೆ" ಅನ್ನಿಸಿ ಕೊಳ್ಳಲು ಸಾಧ್ಯವೆ ? ವೈಯಕ್ತಿಕವಾಗಿ ನನ್ನದೂ ಒಂದು ಮನವಿ : ದಯವಿಟ್ಟು 'ಅನ್ವೇಷಣೆ' ಬಂಡಾಯ 10 ವರ್ಷಗಳ ಕುರಿತು ತಂದ ಎರಡು ವಿಶೇಷಾಂಕಗಳೊಗಿನ "ಮೌಲಿಕ" ಉತ್ತರಗಳನ್ನು ಮುಂದಿನ ಅಕಾಡೆಮಿ ವಿಮರ್ಶೆಯಲ್ಲಿ ಸೇರಿಸಲು ಸಾಧ್ಯವೆ? ಅಥವಾ ಯಾವುದೇ ಪತ್ರಿಕೆಯ ಸಾಹಿತ್ಯವನ್ನು ಕುರಿತಂಥ ಪ್ರಶ್ನೋತ್ತರ ಮಾಲಿಕೆಯ ಉತ್ತರಗಳನ್ನು "ಸಾಹಿತ್ಯ ವಿಮರ್ಶೆ"ಯಲ್ಲಿ ಪ್ರಕಟಿಸಲು ಸಾಧ್ಯವೆ ? ಈಗೀಗ ಬೇರೆ ಬೇರೆ ಕಾರಣಕ್ಕೆ ಸುದ್ದಿ ಮಾಡುತ್ತಿರುವ "ರಾಜೇಂದ್ರ ಚೆನ್ನಿ" ಅವರಾಗಲಿ, ಅಕಾಡೆಮಿ ಯಾಗಲಿ ಈ ಬಗ್ಗೆ ಏನಾದರೂ ಉತ್ತರಿಸಲು ಸಾಧ್ಯವೆ ?

[illegible] 1990

ಆರ್. ಜಿ. ಹಳ್ಳಿ ನಾಗರಾಜ್
ಸಂಪಾದಕ

ಹೇಳುವ........ಭಾರತದ ಹಿಂದೂಗಳಿಗೆ ಇಸ್ಲಾಂ ಬಗ್ಗೆ ಇರುವ ಅಜ್ಞಾನ, ಮಹಮ್ಮದೀಯರ ಬಗ್ಗೆ ಇರಬಹುದಾದ ಅಪನಂಬಿಕೆ, ಅಸಹನೆ,ಅವಜ್ಞೆ, ದ್ವೇಷ, ತಿರಸ್ಕಾರದ ಭಾವನೆಗಳನ್ನು ಹೋಗಲಾಡಿಸುವುದರ ಜೊತೆಗೇ ಭಾರತದ ಮುಸ್ಲಿಮರಿಗೆ ತಮ್ಮ ಧರ್ಮದ ಬಗ್ಗೆ ಇರುವ ಅಜ್ಞಾನವನ್ನು ಹೋಗಲಾಡಿಸುವುದೂ ಆಗಿದೆ........[2]" ಇಂಥ ವಿಚಾರಗಳು ಯಾವುದೇ ಜನಾಂಗದ ಐತಿಹಾಸಿಕ ಹಿನ್ನೆಲೆಗಳನ್ನು ಪರಿಶೀಲಿಸುವಾಗ ಕುತೂಹಲಕಾರಿಯಾಗಿರುತ್ತವೆ. ಅವುಗಳನ್ನು ತಿಳಿದುಕೊಳ್ಳುವ ಮನಸ್ಸಿರಬೇಕು, ಅಷ್ಟೆ. ಈ ಲೇಖನ ಅಚ್ಚಿನ ಮನೆಗೆ ಹೋದ ದಿನ ಅಲ್ಲಿ ಕೊಂಚ ಪ್ರತಿಭಟನೆ ಎದುರಿಸಿದೆ, ಈ ಪ್ರತಿಭಟನೆಗೆ ಕಾರಣಗಳೂ ಇದ್ದವು. ಆ ದಿನ ಕಾಶ್ಮೀರದಲ್ಲಿ ಎಚ್. ಎಂ. ಟಿ. ಜನರಲ್ ಮೇನೇಜರ್ ಮತ್ತು ವಿಶ್ವವಿದ್ಯಾಲಯದ ಉಪಕುಲಪತಿ ಹಾಗೂ ಅವರ ಸಹಾಯಕನನ್ನು ಅಪಹರಿಸಿ ಗುಂಡಿಟ್ಟು ಕೊಲ್ಲಲಾಗಿತ್ತು. ಯಾವುದೋ ಭಾವನಾತ್ಮಕ ಸಂಬಂಧದಲ್ಲಿ ಮಾನವೀಯತೆಗೆ ಬೆಲೆ ಇಲ್ಲದಂಥ ಸಂದರ್ಭ ನನ್ನನ್ನೂ ಒಳಗೊಂಡು ಹಲವರಿಗೆ ವೇದನೆಯನ್ನುಂಟು ಮಾಡಿದ್ದು ನಿಜ. "ಇಡೀ ಲೇಖನವನ್ನು ಓದಿ ಈ ಕುರಿತು ಗಂಭೀರವಾಗಿ ಯೋಚಿಸಿ'' ಎಂದು ಅಚ್ಚಿನ ಮನೆಯ ಮಿತ್ರರಿಗೆ ತಿಳಿಸಿ, ಕೂತು ಓದಿದಾಗ ಅವರಲ್ಲಿದ್ದ ಪ್ರತಿಭಟನೆ ಕಾವು ತಣ್ಣಗಾಗಿತ್ತು. ಹಿಂದೂಗಳಲ್ಲಿನ ಮುಖ್ಯವಾಗಿ ಬ್ರಾಹ್ಮಣರ ಕಂದಾಚಾರಗಳು, ವೈಯಕ್ತಿಕ ಕಲಹ, ಕುಟಿಲೋಪಾಯ, ಅಸಹನೆ, (ಓದಿ : ಪುಟ 26, 27, 28) ಹೇಗೆ ಧಾರ್ಮಿಕ ವಿಚಾರಗಳಿಗೆ ರಾಜಕೀಯ ಬಣ್ಣದ ಲೇಪನ ಆಯಿತೆಂಬುದನ್ನು ರಾಯ್ ಹೇಳುವಾಗ "ಚರ್ಚೆ ಇನ್ನೂ ಸಾಧ್ಯ" ಎಂಬ ತೀರ್ಮಾನಕ್ಕೆ ಬರಲಾಯಿತು. ಅದರಂತೆ ಗಂಭೀರ ಓದುಗರೂ ಇಂಥ ಚರ್ಚೆ ಸಾಧ್ಯವಿದ್ದರೆ ಚರ್ಚಿಸಲು ಪ್ರತಿಕ್ರಿಯಿಸಲು 'ಅನ್ವೇಷಣೆ' ವೇದಿಕೆ ಬಳಸಿಕೊಳ್ಳಬಹುದು. ಬರೆಯಿರಿ.

**ಸಾಹಿತ್ಯ ಅಕಾಡೆಮಿ 88ರ ವಿಮರ್ಶೆ**

ಡಾ|| ಜಿ. ಎಸ್. ಶಿವರುದ್ರಪ್ಪನವರ ಅಧ್ಯಕ್ಷ ಅವಧಿಯ ಕರ್ನಾಟಕ ಸಾಹಿತ್ಯ ಅಕಾಡೆಮಿ ಸಾಧನೆಗಳು ಸಾಕಷ್ಟು ಉತ್ತಮವಾಗಿವೆ. ಈ ಉತ್ತಮ ಸಾಧನೆ ಅವರು ಯೋಜಿಸಿದ ವಿಚಾರ ಸಂಕಿರಣಗಳಲ್ಲಿ ಹಾಗೂ ಪ್ರಕಟಣೆಗಳಲ್ಲಿ ಕಾಣುತ್ತದೆ. ಆದರೆ ಈ ಪ್ರಕಟಣೆಗಳೆಲ್ಲಾ ದೋಷಮುಕ್ತವಾಗಿವೆಯೆಂದೇನೂ ಇಲ್ಲ. ಅಕಾಡೆಮಿ ಪ್ರಕಟಿಸುವ ವಾರ್ಷಿಕ ವಿಮರ್ಶೆ, ಕವನ, ಕಥಾಸಂಕಲನಗಳು ನೇಮಿಸಿದ ಸಂಪಾದಕನ ಧೋರಣೆ, ಅವನು ಒಪ್ಪಿದ ವಿಚಾರಗಳ ಅಡಿಯಲ್ಲಿ ಪ್ರಕಟವಾಗುತ್ತಿರುವುದು ನಿಜವಾದರೂ ; ಆಯ್ಕೆಯಲ್ಲಿ ಪ್ರಬಲ ಕೈವಾಡಗಳೂ ನಡೆವ ಗುಮಾನಿಗಳಿವೆ. ಅಂಥ ಒಂದು ಗುಮಾನಿಗೆ ಕಾರಣವಾದ 1983ರ "ಸಾಹಿತ್ಯ ವಿಮರ್ಶೆ" ಕುರಿತು ಕೆಲ ಮಾತುಗಳನ್ನಿಲ್ಲಿ ಹೇಳಬೇಕಿದೆ :

ಸಮಕಾಲೀನ ವಿಮರ್ಶೆಯು ಒಲವುಗಳ ಚರ್ಚೆಯಿಂದ ಸಾಹಿತ್ಯದೊಂದಿಗೆ ಸೃಷ್ಟಿಶೀಲವಾದ ಸಂವಾದವನ್ನು ಏರ್ಪಡಿಸುವ ಮತ್ತು "ನಿಯತ ಕಾಲಿಕಗಳಲ್ಲಿ ಪ್ರಕಟ

2. ಇದೇ ಸಂಚಿಕೆ ಪುಟ 18 ''ಇಸ್ಲಾಂ ಕುರಿತು ಎಂ. ಎನ್. ರಾಯ್ ಅವರ ವಿ...

ವಾಗುವ ವಿಮರ್ಶೆ ಗ್ರಂಥಸ್ಥ ವಿಮರ್ಶೆಗಿಂತ ಕೊಂಚ ಭಿನ್ನವಾಗಿರಬೇಕು" ಎಂಬ ಆಶಯದೊಂದಿಗೆ ರಾಜೇಂದ್ರ ಚೆನ್ನಿ ಅವರು ಸಂಪಾದಿಸಿದ ಕೃತಿ ತಮ್ಮ ಆಶಯಕ್ಕೆ ಮತ್ತು ಅಕಾಡೆಮಿಯ ನಿಯಮಕ್ಕೆ ಬದ್ಧವಾಗಿ ಬಂದಿದೆಯೆ? ಎಂಬ ಪ್ರಶ್ನೆ ಇದೆ. ಈ ಪ್ರಶ್ನೆಯೊಂದಿಗೆ ಈ ಕೃತಿಯಲ್ಲಿನ ಹಲವು ಬರಹಗಳು "ಗುಮಾನಿ" ವ್ಯಕ್ತಪಡಿಸು ವಂತಿವೆ. ಜೊತೆಗೆ ಕೆಲ ಲೇಖಕರಿಗೆ "ಅನಾವಶ್ಯಕ ಅವಕಾಶ" ಕೊಟ್ಟ ಬಗ್ಗೆ ಸುಳಿಹುಗಳಿವೆ.

ಉದಾ: ಪುಟ 100 ಮತ್ತು 118ರ ಎಚ್. ಎಸ್. ಶಿವಪ್ರಕಾಶ್ "ಫೇವರಿ ಸಮ್" ಬರಹಗಳು ಹಾಗೂ ಪುಟ 48 ಮತ್ತು 53ರ ಲೇಖನ (?)ಗಳು ಯಾ ಪ್ರಶ್ನೋತ್ತರಗಳು ಇಂಥ ಸಂಶಯದಿಂದ ಕೂಡಿವೆ. ಈ ಬರಹಗಳ ಕರ್ತೃಗಳು ನನಗೆ ಒಂದಲ್ಲಾ ಒಂದು ಕಾರಣಕ್ಕೆ ಪ್ರಿಯವಾದರೂ ಅಕಾಡೆಮಿಯಂಥ ಜವಾಬ್ದಾರಿ ಸಂಸ್ಥೆಯ ಪ್ರಕಟಣೆಯಲ್ಲಿ ಪವಾಡ ನಡೆವ ಬಗ್ಗೆ ನಿಮ್ಮಗಳ ಗಮನಕ್ಕೆ ತರುವುದು ಅನಿವಾರ್ಯವಾಗಿದೆ. ಓದಿ-"**ಮೊದಲ ಪ್ರಶ್ನೆ**ಗೆ ಉತ್ತರವನ್ನು ಆಧುನಿಕ ಸಾಹಿತ್ಯದ ಸಂದರ್ಭದಲ್ಲಿ ವಿವರಿಸಿಕೊಳ್ಳುವುದೇ ಹೆಚ್ಚು ಪ್ರಸ್ತುತವೆನಿಸುತ್ತದೆ"(ಪುಟ 53)

"4. ಬೇರೆ ದೇಶಗಳ ಪ್ರತಿಭಟನೆಯ ಸಾಹಿತ್ಯವನ್ನು ಹೆಚ್ಚು ತಿಳಿದಿಲ್ಲದ ನನಗೆ ಈ ಪ್ರಶ್ನೆಗೆ ಉತ್ತರ ಹೇಳುವುದು ಕಷ್ಟ ಕ್ಷಮಿಸಿ" (ಪುಟ 58)- ಎಂದಿದೆ.

ಒಬ್ಬ ಸಾಮಾನ್ಯ ಓದುಗ ಅಥವಾ ಗಂಭೀರ ಓದುಗ ಇಬ್ಬರಿಗೂ ಈ ಬರಹ ಕೊಡೋಣ. ಅವರ ತತ್‌ಕ್ಷಣದ ಪ್ರತಿಕ್ರಿಯೆ ಏನಿರಬಹುದು ?

(ಅ) ಇಲ್ಲಿ ಪ್ರಶ್ನೆಗಳೇ ಇಲ್ಲದೆ 1, 2, 3, 4, ಇತ್ಯಾದಿ ಹಂತದ ಉತ್ತರ ಗಳಿವೆ. ಅಂದರೆ ಯಾವುದೋ ನಿರ್ದಿಷ್ಟ ಉದ್ದೇಶದ ಪ್ರಶ್ನೋತ್ತರ ಮಾಲಿಕೆಯ ಉತ್ತರಗಳಿವು ಅಂದಥಾಯಿತು. ಹಾಗಾದರೆ ಪ್ರಶ್ನೆಗಳೆಲ್ಲಿ ಸ್ವಾಮಿ ? ನನ್ನಂಥವನು ಗಲಿಬಿಲಿಯಾಗುವುದೇ ಇಂಥ "ಬರೀ ಉತ್ತರ" ಕಂಡಾಗತಾನೆ?

(ಆ) ಸಾಹಿತ್ಯ ಚಳುವಳಿಗೋ, ಸಾಹಿತ್ಯ ಪರಂಪರೆಗೋ ಸಂಬಂಧಿಸಿದ ಪ್ರಶ್ನೆಗಳನ್ನು ಬಿಟ್ಟು ಬರೀ ಉತ್ತರಗಳ ಪ್ರಕಟಣೆ "**ಸಾಹಿತ್ಯ ವಿಮರ್ಶೆ**" ಅನ್ನಿಸಿ ಕೊಳ್ಳಲು ಸಾಧ್ಯವೆ ? ವೈಯಕ್ತಿಕವಾಗಿ ನನ್ನದೂ ಒಂದು ಮನವಿ : ದಯವಿಟ್ಟು 'ಅನ್ವೇಷಣೆ' ಬಂಡಾಯ 10 ವರ್ಷಗಳ ಕುರಿತು ತಂದ ಎರಡು ವಿಶೇಷಾಂಕಗಳೊಗಿನ "ಮೌಲಿಕ" ಉತ್ತರಗಳನ್ನು ಮುಂದಿನ ಅಕಾಡೆಮಿ ವಿಮರ್ಶೆಯಲ್ಲಿ ಸೇರಿಸಲು ಸಾಧ್ಯವೆ? ಅಥವಾ ಯಾವುದೇ ಪತ್ರಿಕೆಯ ಸಾಹಿತ್ಯವನ್ನು ಕುರಿತಂಥ ಪ್ರಶ್ನೋತ್ತರ ಮಾಲಿಕೆಯ ಉತ್ತರಗಳನ್ನು "ಸಾಹಿತ್ಯ ವಿಮರ್ಶೆ"ಯಲ್ಲಿ ಪ್ರಕಟಿಸಲು ಸಾಧ್ಯವೆ ? ಈಗೀಗ ಬೇರೆ ಬೇರೆ ಕಾರಣಕ್ಕೆ ಸುದ್ದಿ ಮಾಡುತ್ತಿರುವ "ರಾಜೇಂದ್ರ ಚೆನ್ನಿ" ಅವರಾಗಲಿ, ಅಕಾಡೆಮಿ ಯಾಗಲಿ ಈ ಬಗ್ಗೆ ಏನಾದರೂ ಉತ್ತರಿಸಲು ಸಾಧ್ಯವೆ ?

... 5 1990

**ಆರ್. ಜಿ. ಹಳ್ಳಿ ನಾಗರಾಜ್**
ಸಂಪಾದಕ

ಪ್ರಿಯರೆ,

''ಅನ್ವೇಷಣೆ'' ಚಂದಾ ಬಾಕಿ ಕಳುಹಿಸಿ ಎಂದು ವೈಯಕ್ತಿಕವಾಗಿ ಎಲ್ಲಾ ಚಂದಾದಾರರಿಗೂ ಬರೆಯಲು ಸಾಧ್ಯವಾಗಿಲ್ಲ. ನೂರಾರು ಮಿತ್ರರಿಗೆ ಪತ್ರಿಕೆ ತಲುಪುತ್ತಿದ್ದರೂ 'ಮೌನ'ವಾಗಿರುತ್ತಾರೆ. ಈಗ ಅಂಥವರು ಪತ್ರಿಕೆ ಬೇಕು/ಬೇಡಗಳ ಬಗ್ಗೆ ದಯವಿಟ್ಟು ತಿಳಿಸಿ. ಪತ್ರಿಕೆ ಬೇಕಿದ್ದವರು ''ಬಾಕಿ'' ಕಳುಹಿಸುವುದರ ಮೂಲಕ ಪತ್ರಿಕೆ ಉಳಿಸಿ ಬೆಳೆಸಲು ಸಹಕರಿಸಿ ಎಂದು ಈ ಮೂಲಕ ಮನವಿ ಮಾಡಿಕೊಳ್ಳುತ್ತಿರುವೆ.

ಜೊತೆಗೆ ಕಾಲೇಜು ಅಧ್ಯಾಪಕ ಮಿತ್ರರಲ್ಲೊಂದು ಮನವಿ: ನಿಮ್ಮ ಕಾಲೇಜು ಗ್ರಂಥಾಲಯಕ್ಕೆ 'ಅನ್ವೇಷಣೆ' ತರಿಸಿಕೊಳ್ಳುವ ವ್ಯವಸ್ಥೆ ಮಾಡಿ-ಬರೆಯಿರಿ.

–ಸಂಪಾದಕ

o 'ಅನ್ವೇಷಣೆ'ಯಲ್ಲಿ ಪ್ರಕಟವಾಗುವ ಬರಹಗಳ ಹೊಣೆ ಆಯಾ ಲೇಖಕರದ್ದು

## ಈ ಸಂಚಿಕೆಯ ಲೇಖಕರು/ವಿಳಾಸ

---

o ಡಾ॥ ಆರ್ಕೆ, ಮಣಿಪಾಲ, ಎಂ. ಐ. ಜಿ-118, ಹುಡ್ಕೊ ಮನೆಗಳು, ಮಣಿಪಾಲ 576119 (ದ.ಕ.) o ಆರ್. ಲಕ್ಷ್ಮೀನಾರಾಯಣ, ರೀಡರ್, ಕನ್ನಡ ವಿಭಾಗ ಸರ್ಕಾರಿ ಮಹಿಳಾ ಪ್ರಥಮ ದರ್ಜೆ ಕಾಲೇಜು, ಕೋಲಾರ - 563101 o ಡಾ॥ ನಾ. ಮೊಗಸಾಲೆ, ಕಾಂತವರ - 574129. (ದ.ಕ.) o ನಜೀರ್ ಚಂದಾವರ, ರಾಮನಗರ ಬಡಾವಣೆ, ಶಿರಸಿ - 581301. (ಉ. ಕ.) o ಡಾ॥ ಚೆನ್ನಣ್ಣ ವಾಲೀಕಾರ, ರೀಡರ್, ಕನ್ನಡ ಅಧ್ಯಯನ ಸಂಸ್ಥೆ, ಗುಲಬರ್ಗಾ ವಿಶ್ವವಿದ್ಯಾಲಯ, ಗುಲಬರ್ಗಾ – 585106. o ಸುಬ್ರಾಯ ಮತ್ತಿಹಳ್ಳಿ, ಮತ್ತಿಹಳ್ಳಿ, ನಾಣಿಕಟ್ಟಾ - ಅಂಚೆ, ಸಿದ್ದಾಪುರ - ತಾ॥ 581340. (ಉ. ಕ.) o ವಿದ್ಯಾ ಭರತನಹಳ್ಳಿ, ಸಂಯುಕ್ತ ಕರ್ನಾಟಕ (ಸಾಪ್ತಾಹಿಕ ಸೌರಭ) ಕೊಪ್ಪೀಕರ ರಸ್ತೆ, ಹುಬ್ಬಳ್ಳಿ. o ಬಂದಗದ್ದೆ ರಾಧಾಕೃಷ್ಣ, ಮತ್ತು ಶೈಲೇಂದ್ರ ಬಂದಗದ್ದೆ, ಕೆಳದಿ-ಅಂಚೆ, ಸಾಗರ-ತಾ॥ 577443. o ಎಲ್. ಎನ್. ಮುಕುಂದರಾಜ್, 5, 1ನೇ ಕ್ರಾಸ್, ನಾಗಪ್ಪ ಬೀದಿ, ಪ್ಯಾಲೇಸ್ ಗುಟ್ಟಹಳ್ಳಿ, ಬೆಂಗಳೂರು-560003. o ಶಂಕರಗೌಡ ಸಾತ್ಮಾರ, ಇಂಗ್ಲಿಷ್ ಉಪನ್ಯಾಸಕ, ಸರ್ಕಾರಿ ಪ್ರಥಮ ದರ್ಜೆ ಕಾಲೇಜು, ನರಗುಂದ, ಧಾರವಾಡ-ಜಿಲ್ಲೆ-582207 o ಡಾ॥ ಎಸ್.ವಿ. ಪ್ರಭಾವತಿ ಕನ್ನಡ ವಿಭಾಗ, ಭಾರತೀಯ ಸಂಸ್ಕೃತಿ ವಿದ್ಯಾಪೀಠ ಮಹಿಳಾ ಕಾಲೇಜು, [illegible] ನಗರ, ಬೆಂಗಳೂರು-560040.

# '೮೦ರ ದಶಕದ ಕನ್ನಡ ವಿಮರ್ಶೆ' :

## ಕೆಲವು ಪರಿಶೀಲನೆಗಳು*

—ಡಾ॥ ಆರ್ಕೆ, ಮಣಿಪಾಲ

'೮೦ರ ದಶಕದಲ್ಲಿ ಪ್ರಕಟವಾದ ವಿಮರ್ಶಾಕೃತಿಗಳಲ್ಲಿ ಮುಖ್ಯವಾದುವುಗಳನ್ನು ಪಟ್ಟಿಮಾಡುತ್ತ ಹೋದ ಹಾಗೆ ಈ ಪಟ್ಟಿ ಸಾಕಷ್ಟು ದೀರ್ಘವೇ ಆಗಿಬಿಟ್ಟಿತು. ಈ ಪಟ್ಟಿಯನ್ನು ನೋಡಿದರೆ ಕನ್ನಡ ವಿಮರ್ಶಾವಲಯ ತನ್ನ ಜೀವಂತಿಕೆಯನ್ನು ಉಳಿಸಿಕೊಂಡಿದೆ ಎಂಬುದು ಮೊದಲ ನೋಟಕ್ಕೇ ವ್ಯಕ್ತವಾಗುತ್ತದೆ. ಗ್ರಂಥಗಳ ವೈಪುಲ್ಯದೊಂದಿಗೆ ವಿವಿಧ ಸಿದ್ಧಾಂತಗಳನ್ನು ಪ್ರತಿನಿಧಿಸುವ ಕೃತಿಗಳು ಹೆಚ್ಚುಕಮ್ಮಿ ಸಮಪ್ರಮಾಣದಲ್ಲಿ ಪ್ರಕಟವಾಗಿರುವುದು ಈ ಜೀವಂತಿಕೆಯ ಸ್ವರೂಪವನ್ನು ಅರ್ಥಪೂರ್ಣವಾಗಿ ವ್ಯಾಖ್ಯಾನಿಸುತ್ತದೆ.

ಈ ದಶಕದ ಪ್ರಮುಖ ವಿಮರ್ಶಾಗ್ರಂಥಗಳನ್ನು ಅವುಗಳ ಹಿಂದೆ ಕೆಲಸ ಮಾಡಿರುವ ವಿಚಾರ ಪ್ರಣಾಲಿಗೆ ಅನುಸಾರವಾಗಿ, ವಸ್ತುವಿಗೆ ಸಂಬಂಧಿಸಿ , ಹೀಗೆ ಮೂರು ಪಂಗಡಗಳನ್ನಾಗಿ ಕಲ್ಪಿಸಬಹುದು :

1 **ಸಮಾಜವಾದಿ** (ದಲಿತ-ಬಂಡಾಯ) **ವಿಚಾರಧಾರೆಯವು :** ಮುನ್ನೋಟ (೧೯೮೦) ಕಟಾಕ್ಷ (೧೯೮೧), ಸಾಹಿತ್ಯ ಮತ್ತು ರಾಜಕಾರಣ (೧೯೮೧), ಸಾಹಿತ್ಯ ಮತ್ತು ಸಮಾಜ (೧೯೮೨), ಬದಲಾವಣೆ (೧೯೮೨), ದುಡಿಯುವವರ ದನಿ ಮತ್ತು ಇತರ ಲೇಖನಗಳು (೧೯೮೩), ಅಮೃತ ಮತ್ತು ಗರುಡ (೧೯೮೩), ಸೀತಾಯಣ (೧೯೮೩), ನಾಟಕ : ರಂಗಕೃತಿ (೧೯೮೫), ಸಾಹಿತ್ಯ : ಸಿದ್ಧಾಂತ ಮತ್ತು ಹೋರಾಟ (೧೯೮೬), ವಾಲ್ಮೀಕಿ ತೂಕಡಿಸಿದಾಗ (೧೯೮೬), ಕನ್ನಡ ಸಾಹಿತ್ಯ : ಚಾರಿತ್ರಿಕ ಬೆಳವಣಿಗೆ (೧) (೧೯೮೬), ಸಾರ್ವತ್ರಿಕದೆಡೆಗೆ (೧೯೮೭), ಶಕ್ತಿ ಶಾರದೆಯ ಮೇಳ (೧೯೮೮), ಸಾಹಿತ್ಯ : ಆಶಯ ಮತ್ತು ವಿನ್ಯಾಸ (೧೯೮೮), ಸಮಾಜವಾದಿ ವಾಸ್ತವ (೧೯೮೯), ಮಹಿಳೆ ಸಾಹಿತ್ಯ ಸಮಾಜ (೧೯೮೯)

2 **ನವ್ಯ ಪ್ರಸ್ಥಾನವು :** ಅನಿವಾರ್ಯ (೧೯೮೦) ಸಮಕ್ಷಮ (೧೯೮೦), ಒಳನೋಟ (೧೯೮೦), ಸಾಹಿತ್ಯ ಮತ್ತು ಪರಂಪರೆ (೧೯೮೧), ಪೂರ್ವಸೂರಿಗಳೊಡನೆ (೧೯೮೧) ಕಾರಂತರ ಕಾದಂಬರಿಗಳಲ್ಲಿ ಗಂಡು ಹೆಣ್ಣು (೧೯೮೨), ನಿರಪೇಕ್ಷ

* ಇದೇ ಫೆಬ್ರವರಿ 16-18ರಂದು ಹುಬ್ಬಳ್ಳಿಯಲ್ಲಿ ಜರುಗಿದ 59ನೇ ಅಖಿಲಭಾರತ ಸಾಹಿತ್ಯ ಸಮ್ಮೇಳನದಲ್ಲಿ 'ಕನ್ನಡ ಸಾಹಿತ್ಯದ ಇತ್ತೀಚಿನ ಒಲವುಗಳು' ಎಂಬ ಗೋಷ್ಠಿಯಲ್ಲಿ 'ವಿಮರ್ಶೆ-ಶೋಧನೆ' ಎಂಬ ಹೆಸರಿನಲ್ಲಿ ಮಂಡಿಸಿದ ಪ್ರಬಂಧದ ಮುಖ್ಯಭಾಗ.

(೧೯೮೪), ಸಾಹಿತ್ಯ ಸಂಪರ್ಕ (೧೯೮೬), ಸಂಸ್ಕೃತಿ ಸ್ಪಂದನ (೧೯೮೬), ಅಧ್ಯಯನ (೧೯೮೭), ಕನ್ನಡ ನಾಟಕ ಸಮೀಕ್ಷೆ (೧೯೮೭), ನಿಜದನಿ (೧೯೮೮), ಅರ್ಥಲೋಕ (೧೯೮೮), ಸಾಹಿತ್ಯ ಬದುಕು (೧೯೮೯)

**3 ಸಾಹಿತ್ಯ ವಿಮರ್ಶೆ, ಕಾವ್ಯಮೀಮಾಂಸೆಗೆ ಸಂಬಂಧಿಸಿದ ಆಕರ ಗ್ರಂಥಗಳು:**
ಸಂಶೋಧನ ಗ್ರಂಥಗಳು : ವಿಮರ್ಶೆಯ ಪರಿಭಾಷೆ (೧೯೮೩), ಕಾವ್ಯಾರ್ಥಚಿಂತನ (೧೯೮೩), ಧ್ವನ್ಯಾಲೋಕ : ಒಂದು ಅಧ್ಯಯನ (೧೯೮೮)

ಮೇಲಿನ ವರ್ಗೀಕರಣ ಅಧ್ಯಯನದ ಸೌಲಭ್ಯಕ್ಕಾಗಿ ಮಾಡಿರುವುದೇ ವಿನಾ ದೋಷರಹಿತವಾದುದೇನಲ್ಲ. ಏಕೆಂದರೆ, ನವ್ಯದ ಉಚ್ಛ್ರಾಯದ ವೇಳೆ ಬರೆಯುತ್ತಿದ್ದ ನವ್ಯವಿಮರ್ಶಕರ ಈಚಿನ ಬರೆಹಗಳು ಕೂಡ ನವ್ಯೋತ್ತರ ಸಾಹಿತ್ಯ ಸಿದ್ಧಾಂತಗಳ ಬಗೆಗೆ ಉದಾರವಾಗಿ ಸ್ಪಂದಿಸಿರುವುದು ಹಾಗೂ ಬಂಡಾಯ ದಲಿತ ಸಿದ್ಧಾಂತದ ವಿಮರ್ಶಕರಲ್ಲೂ ಕೆಲವರು ಇನ್ನೂ ನವ್ಯವಿಮರ್ಶೆಯ ಕೆಲವು ಮಾದರಿ ಅಂಶಗಳನ್ನು ತಮ್ಮ ಬರೆಹಗಳಲ್ಲಿ ಪ್ರಕಟಿಸಿರುವುದನ್ನೂ ಗಮನಿಸಬಹುದು. ಫೆಮಿನಿಸ್ಟ್ ಧೋರಣೆ ಪ್ರಧಾನವಾಗಿರುವ ಅಥವಾ ವಿಚಾರವಾದಿ ಒಲವುಗಳ ಬರೆಹಗಳನ್ನು ಮೊದಲನೆಯ ಪಂಗಡದಲ್ಲಿ ಸೇರಿಸಲಾಗಿದೆ. 'ಶುದ್ಧ ಸಾಹಿತ್ಯಕ'ವೆನ್ನಬಹುದಾದ, ಸದಭಿರುಚಿಯ, ಬರೆಹಗಳನ್ನು ಅವುಗಳ ಸ್ಥೂಲ ಲಕ್ಷಣಗಳನ್ನು ಗಮನಿಸಿ ಎರಡನೇ ಪಂಗಡದಲ್ಲಿ ಸೇರಿಸಲಾಗಿದೆ.

ಇಡಿಯ ದಶಕದ ವಿಮರ್ಶಾ ಕೃತಿಗಳನ್ನು ಒಟ್ಟಿಗಿಟ್ಟು ಹೇಳುವುದಾದರೆ, ಹಿಂದಿನ ದಶಕಕ್ಕಿಂತ ಹೆಚ್ಚು ಸಮಾಜ ಸಮ್ಮುಖವಾದ ಚಿಂತನಪರತೆಯುಳ್ಳ ಮತ್ತು ಸಂಕೀರ್ಣವಾದ ಸಂಕಲನಗಳು ಈ ದಶಕದಲ್ಲಿ ಪ್ರಕಟವಾಗಿದ್ದು, ಸಾಹಿತಿಯ ಸಾಮಾಜಿಕ ಹೊಣೆಗಾರಿಕೆಗೆ ಒತ್ತು ಬಿದ್ದಿದೆ ಎಂದನಿಸುತ್ತದೆ. ಆ ಮೂಲಕ ವಿಮರ್ಶೆ ಹೆಚ್ಚು ಉದ್ದೇಶಪರ ಕ್ರಿಯೆಯಾಗುತ್ತಿದೆ. ಸಾಹಿತ್ಯದ ಅನುಭವ ದ್ರವ್ಯದ ಆಕರಗಳ ಅಧಿಕೃತತೆ ಕುರಿತೂ ಮೂಲಭೂತ ಜಿಜ್ಞಾಸೆ ಉಂಟಾಗಿರುವುದರಿಂದ, ಸಾಹಿತ್ಯ ವಿಮರ್ಶಕ ಅನಿವಾರ್ಯವಾಗಿಯೇ ಇತರ ಜ್ಞಾನವಲಯಗಳ ಕಡೆಗೂ ಕತ್ತು ಚಾಚುವಂತಾಗಿದೆ. ಸೃಜನಶೀಲಕ್ಷೇತ್ರದಲ್ಲಿಯೂ ಅತ್ಯುತ್ಕೃಷ್ಟವಲ್ಲದಿದ್ದರೂ ಉತ್ಕೃಷ್ಟತೆಯ ಗುರಿಯುಳ್ಳ 'ಒಡಲಾಳ' 'ಕುಸುಮಬಾಲೆ' 'ವೈಶಾಖ' 'ಭುಜಂಗಯ್ಯನ ದಶಾವತಾರಗಳು'ವಿನಂಥ ಕೃತಿಗಳು ಬೆಳಕು ಕಂಡಿವೆ. ದಲಿತ ಬಂಡಾಯ ಚಳವಳಿ ಹುಟ್ಟುಹಾಕಿದ ಹೊಸ ವೈಚಾರಿಕತೆಯನ್ನು ಮೈಗೂಡಿಸಿಕೊಂಡೇ ಹೆಚ್ಚಿನ ಕೃತಿಗಳು–ಮುಖ್ಯವಾಗಿ 'ಬಂಡಾಯ' 'ವೈಶಾಖ'–ರೂಪು ಪಡೆದಿವೆ ಎಂಬುದನ್ನು ಕೂಡ ಗಮನಿಸಬೇಕಾಗಿದೆ.

ಪ್ರಸ್ತುತ ಸಮೀಕ್ಷೆಯಲ್ಲಿ ಇಲ್ಲಿ ವರ್ಗೀಕರಿಸಿದ ಪಂಗಡಗಳ ಬಗ್ಗೆಯಾಗಲಿ, ಪ್ರಮುಖ ಕೃತಿಗಳ ಬಗ್ಗೆಯಾಗಲಿ ವಿವರವಾದ ವಿಶ್ಲೇಷಣೆ ಅಸಾಧ್ಯವಾದುದರಿಂದ,

ಈಚಿನ ವಿಮರ್ಶಾ ನೆಲೆಗಳು ಮತ್ತು ಸ್ಥೂಲ ಪ್ರವೃತ್ತಿ (trend)ಗಳನ್ನು ಪ್ರಸ್ತಾಪಿಸಲು ಎಷ್ಟು ಅಗತ್ಯವೋ ಅಷ್ಟರಮಟ್ಟಿಗೆ ಮಾತ್ರ ವಿಮರ್ಶಾ ಕೃತಿಗಳನ್ನು ಇಲ್ಲಿ ಉಲ್ಲೇಖಿಸುತ್ತೇನೆ.

ಸಾಹಿತ್ಯ ತತ್ವಕ್ಕೆ ಸಂಬಂಧಿಸಿದ ವೈಚಾರಿಕ ಗ್ರಂಥಗಳು ಹಾಗೂ ಲೇಖನಗಳು ೭೦ರ ದಶಕಕ್ಕಿಂತ ಹೆಚ್ಚಾಗಿ, ೮೦ರ ದಶಕದಲ್ಲಿ—ಅದರಲ್ಲೂ ಬಂಡಾಯ ಸಾಹಿತ್ಯ ಚಳವಳದ ಉತ್ಕರ್ಷದ ದಿನಗಳಲ್ಲಿ—ಬಂದಿರುವುದನ್ನು ದಾಖಲಿಸುವುದು ಅಗತ್ಯ. ಇವುಗಳಲ್ಲಿ ಹೆಚ್ಚಿನವು ಸಮಾಜವಾದಿ ಸೈದ್ಧಾಂತಿಕ ನೆಲೆಯುವು. ಈ ನಿಟ್ಟಿನಲ್ಲಿ ವಿಶೇಷವಾಗಿ ತೊಡಗಿಸಿಕೊಂಡವರೆಂದರೆ ಜಿ. ರಾಮಕೃಷ್ಣ, ಬರಗೂರು, ಜಿ. ರಾಜಶೇಖರ, ಆರ್ಕೆ, ದರ್ಗಾ, ಡಿ. ಆರ್. ನಾಗರಾಜ್, ಬಿ. ಕೃಷ್ಣಮೂರ್ತಿ ಮುಂತಾದವರು. ಇವರ ಬರೆಹಗಳಲ್ಲಿ ಸಮಾಜವಾದೀ ವಾಸ್ತವದ ಸಿದ್ಧಾಂತಗಳ ತಾತ್ವಿಕಮಟ್ಟದ ಚರ್ಚೆ ಗಹನವಾಗಿಯೇ ನಡೆದಿದ್ದರೂ ಎಲ್ಲರಲ್ಲೂ ಒಂದೇ ಮಟ್ಟದ ಅನ್ವಯಿಕತೆ ಫಲಿಸಿದೆ ಎನ್ನುವಂತಿಲ್ಲ. ಆದರೆ, ಈಚಿನ ದಿನಗಳಲ್ಲಿ ಇವರಲ್ಲಿ ಒಬ್ಬಿಬ್ಬರಾದರೂ ಹೆಚ್ಚು ಸೂಕ್ಷ್ಮ ಒಳನೋಟಗಳುಳ್ಳ ವಿಮರ್ಶೆಗೆ ತೊಡಗಿರುವುದು ತೃಪ್ತಿಯ ಅಂಶವಾಗಿದೆ.

ಮಾರ್ಕ್ಸ್‌ವಾದಿ ಒಲವಿನ ವಿಮರ್ಶಕರಲ್ಲೂ ಎಲ್ಲರೂ ಒಂದೇ ಮಟ್ಟದ ಸಾಧನೆ ನಡೆಸಿಲ್ಲ. ಸಿ. ವೀರಣ್ಣರಂಥವರು ತಮ್ಮ ಸೈದ್ಧಾಂತಿಕ ಅರಿವನ್ನು ಒರಟಾಗಿ, ಯಾಂತ್ರಿಕವಾಗಿ ಕೃತಿ ವಿಶ್ಲೇಷಣೆಯಲ್ಲಿ ಬಳಸಿಕೊಂಡರೆ (೧೯೮೬), ಜಿ. ರಾಜಶೇಖರ್ ಹೆಚ್ಚು ಸೂಕ್ಷ್ಮವಾಗಿ, ಗತಿತಾರ್ಕಿತವಾಗಿ ಅನ್ವಯಿಸುತ್ತಿರುವುದು (೧೯೮೨, 'ಯಶೋಧರ ಕಾವ್ಯದ ದ್ವಂದ್ವವಿನ್ಯಾಸ', ರುಜುವಾತು-೬) ಗಮನಿಸಬೇಕಾಗಿದೆ. ಮಾರ್ಕ್ಸ್‌ವಾದಿ ದೃಷ್ಟಿಕೋನದಿಂದ ಕನ್ನಡ ಸಾಹಿತ್ಯ ಚರಿತ್ರೆಯನ್ನು ಬರೆಯುವ ಬೃಹತ್ ಸವಾಲು ಎತ್ತಿಕೊಂಡಿರುವ ವೀರಣ್ಣ, '.... ಭಾಷೆಯ ಮೂಲಕ ಪ್ರಕಟವಾಗಿರುವ ಕೃತಿಯೇ ಮೂಲ ಸಾಮಗ್ರಿಯಾಗುವುದರಿಂದ ಅದರ ಅಂತರಂಗದಲ್ಲಿ, ಕವಿ ಬಯಸಿದ, ಬಯಸದಿದ್ದರೂ ಅವನನ್ನು ಮೀರಿದ ವಾಸ್ತವಗಳು ಹೇಗೆ ಅಡಗಿದೆ ಎಂಬುದನ್ನು ಎತ್ತಿ ತೋರಿಸುವ ಕೆಲಸವನ್ನು ಸಾಹಿತ್ಯ ಚರಿತ್ರಕಾರ ಮಾಡಬೇಕು. (೧೯೮೬. ಪು. ೫) ಎಂದು ಹೇಳುವಲ್ಲಿ ತನ್ನ ಹೊಣೆಯನ್ನು ಸ್ವೀಕರಿಸುತ್ತಾರಾದರೂ, ಕೃತಿಯ ಒಳರಚನೆಯ ಶೋಧನೆಯ ಮೂಲಕ ತತ್ಕಾಲೀನ ಸಾಮಾಜಿಕ ಸಂರಚನೆಯ ವಿನ್ಯಾಸವನ್ನು ಕಂಡುಕೊಳ್ಳಬಲ್ಲ ಮತ್ತು ವ್ಯಾಖ್ಯಾನಿಸಬಲ್ಲ ಸೂಕ್ಷ್ಮತೆಯನ್ನು ಪ್ರಕಟಿಸಿಲ್ಲ. ನಾವಿಲ್ಲಿ ಪ್ರಶ್ನಿಸಬೇಕಾಗಿರುವುದು ಮಾರ್ಕ್ಸ್‌ವಾದಿ ಸಿದ್ಧಾಂತದ ಬಳಕೆಯನ್ನಲ್ಲ : ಅದನ್ನು ಬಳಸಿಕೊಂಡ ರೀತಿಯನ್ನು. ವಿಮರ್ಶಕನ ಸೂಕ್ಷ್ಮವೀಕ್ಷಣಾ ಸಾಮರ್ಥ್ಯ, ಅಧ್ಯಯನನಿಷ್ಠೆ ಹಾಗೂ ಕಾವ್ಯ ಪ್ರೀತಿಯ ಮೇಳವದಿಂದ ಸಾಕಾರ

ಗೊಳ್ಳುವಂಥಾದ್ದು. ಈ ನಿಟ್ಟಿನಲ್ಲಿ ಸಮಾಜವಾದಿ ವಿಮರ್ಶೆಗೆ ಹೊಸ ಜೀವ ಪ್ರಖರತೆಯನ್ನು ವ್ಯಾಪ್ತಿಯನ್ನೂ ನೀಡಿದ ಡಿ. ಆರ್. ನಾಗರಾಜರ ವಿಮರ್ಶಾಧ್ಯಯನ ವಿಶೇಷ ಉಲ್ಲೇಖ ಬಯಸುತ್ತದೆ. ಅತ್ಯಂತ ಪ್ರಬುದ್ಧ ತಾತ್ವಿಕ ತಳಗಟ್ಟಿನ ಮೇಲೆ ರಚಿತವಾದ 'ಶಕ್ತಿಶಾರದೆಯ ಮೇಳ'ದಲ್ಲಿನ ಪರಿಶೀಲನೆಗಳು ನಮ್ಮ ಆಧುನಿಕ ಕನ್ನಡ ಸಾಹಿತ್ಯ ಪರಂಪರೆ ಕುರಿತಾದ ಪರಿಕಲ್ಪನೆಗಳನ್ನೇ ಮರು ವಿಚಾರಕ್ಕೊಳಪಡಿಸಬೇಕಾದ ಜರೂರನ್ನು ಎತ್ತಿ ಹಿಡಿಯುತ್ತವೆ. ಉದಾ: ಇಂಗ್ಲಿಷ್ ರಮ್ಯ ಸಂಘದಿಂದ ಪ್ರಭಾವಿತರಾದರೂ ಕನ್ನಡ ರಮ್ಯಕವಿಗಳು ಹೇಗೆ ಭಿನ್ನವಾಗಿದ್ದಾರೆ. ಧರ್ಮ ಮತ್ತು ವಿಜ್ಞಾನಗಳ ಸಾಮರಸ್ಯದಿಂದ ಕವಿಗಳ ಧೋರಣೆ ಹೇಗೆ ರೂಪುಗೊಂಡಿತು, ಮಾಸ್ತಿ ಒಬ್ಬರನ್ನು ಹೊರತುಪಡಿಸಿ ಕನ್ನಡ ನವೋದಯವಿಡೀ ಗಾಂಧೀ ರಾಜಕಾರಣಕ್ಕಿಂತ ತಿಲಕ್ ಸಂವೇದನೆಯ ಚೌಕಟ್ಟಿನಲ್ಲಿ ಹೇಗೆ ಬೆಳೆದುಬಂತು ಎಂಬ ಅಂಶಗಳ ವಿಶ್ಲೇಷಣೆ. ಆದರೆ, ಇಲ್ಲಿನ ಕೆಲವು ತೀರ್ಮಾನಗಳು ಇವರ ಹಿಂದಿನ ಕೃತಿ (೧೯೮೩)ಯ ತೀರ್ಮಾನ ಗಳಿಗೆ ಭಿನ್ನವಾಗಿರುವುದು ಮತ್ತು ವಿರುದ್ಧ ನೆಲೆಯಲ್ಲಿರುವುದನ್ನು ಗಮನಿಸಿದಾಗ (ಉದಾ: ಅಡಿಗರ ಬಗ್ಗೆ, ಅವರ ರಾಜಕೀಯ ನಿಲುವಿನ ಬಗ್ಗೆ ಅಂಗೀಕಾರಾತ್ಮಕ ಒಲವನ್ನು ವ್ಯಕ್ತಪಡಿಸಿರುವುದು ಇಂಥ ಒಂದು ಮುಖ್ಯ ವೈರುಧ್ಯದ ನೆಲೆ. ನೋಡಿ: ೧೯೮೩ ಪು. ೪೬ ; ೧೯೮೭ ಪು ೩೦೮) ಆಶ್ಚರ್ಯ ಪಡುವಂತಾಗುತ್ತದೆ. ಕೇವಲ ನಾಲ್ಕುವರ್ಷಗಳ ಅಂತರದಲ್ಲಿ ವಿಮರ್ಶಕನ ನಿಲುವಿನಲ್ಲಾದ ವ್ಯತ್ಯಾಸವನ್ನು ಕಣ್ಣಿಗೆ ಕಣ್ಣಿಟ್ಟು ನೋಡುವುದು, ಕನ್ನಡ ವಿಮರ್ಶೆಯ ಬೆಳವಣಿಗೆಯ ಸ್ವರೂಪವನ್ನು ಹಾಗೂ ವಿಮರ್ಶಕರ ಧೋರಣೆಗಳ ಸ್ವೀಕಾರಾರ್ಹತೆಯನ್ನು ಸಾಬೀತು ಮಾಡ ಬಲ್ಲದು ಎಂದೇ ನನ್ನ ಅನಿಸಿಕೆ. ಇಲ್ಲಿ ಗಮನಿಸಬೇಕಾದ ಇನ್ನೊಂದು ಅಂಶವೆಂದರೆ, ಇಡಿಯ ಗ್ರಂಥದ ತೀರ್ಮಾನಗಳನ್ನು ನವೋದಯ—ನವ್ಯಪಂಥಗಳ ಸತ್ವಶಕ್ತಿಗಳನ್ನು ಕಾವ್ಯ ಮಾಧ್ಯಮವೊಂದರಲ್ಲೇ, ಕಂಡುಕೊಳ್ಳಲು ಉದ್ದೇಶಿಸಿದ್ದು. ಅಷ್ಟರಮಟ್ಟಿಗೆ ಈ ತೀರ್ಮಾನಗಳು ನವ್ಯವಿಮರ್ಶಕರ ಕಾವ್ಯಪ್ರಧಾನ ವಿಶ್ಲೇಷಣೆಯಂತೆ ತಮ್ಮ ಪ್ರಭಾವ ಮತ್ತು ಅರ್ಥವಂತಿಕೆಯನ್ನು ಅನಿವಾರ್ಯವಾಗಿಯೇ ಮಿತಗೊಳಿಸಿ ಕೊಳ್ಳುವಂತಾದುದು.

ಬಂಡಾಯ ವಿಮರ್ಶಾ ನೆಲೆಯೊಳಗೆ ಸಂಸ್ಕೃತಿ-ಜನಾಂಗವಾದಿ ವಿಮರ್ಶಾತ್ಮಕ ನಿಲುವೊಂದಿದ್ದು ಅದನ್ನು ಪ್ರಭಾವಿಯಾಗಿ, ಮುಂದೊತ್ತುವ ಧಾಟಿಯಲ್ಲಿ (assertive tone) ಮಂಡಿಸಿರುವವರು ಪ್ರೊ|| ಕೆ. ಜಿ. ನಾಗರಾಜಪ್ಪ ಅವರು (೧೯೮೫). 'ವೀರ ಶೈವಧರ್ಮ ಮತ್ತು ಕನ್ನಡ ಸಾಹಿತ್ಯ' ಎಂಬ ಲೇಖನ ವಚನ ಪ್ರಕಾರದ ಉಗಮದ ಹಿಂದಿದ್ದ ಒತ್ತಡಗಳನ್ನು ಚಾರಿತ್ರಿಕವಾಗಿ, ತಾತ್ವಿಕವಾಗಿ ಶೋಧಿಸುತ್ತದೆ. ವಚನ ಗಳು ನಂತರದ ಸಾಹಿತ್ಯದ ಮೇಲೆ ತಮ್ಮ ಪ್ರಭಾವ ಬೀರಿರುವುದರೊಂದಿಗೆ, ಸ್ವತಃ

ವಚನಗಳೇ ಅವುಗಳ ಹಿಂದಿನ ಸಾಹಿತ್ಯ ಕೃತಿಗಳಿಂದ ಪ್ರತ್ಯೇಕವಾಗಿರುವುದನ್ನು ಕಂಡುಕೊಳ್ಳುವ ಮೂಲಕ ಸಾಹಿತ್ಯ ವಿಮರ್ಶೆಗೆ ಸಂಶೋಧನಾತ್ಮಕ ಮೌಲ್ಯವನ್ನು ದೊರಕಿಸಿಕೊಟ್ಟಂತಾಗಿದೆ. ಆದರೆ, ಅವರ ವಾದದ ಭೂಮಿಕೆ 'ಬ್ರಾಹ್ಮಣ-ಶೂದ್ರ' ದ್ವಂದ್ವವೇ ಆಗಿರುವುದರಿಂದ, ಹಲವು ಬಾರಿ ಅವರ ನಿಷ್ಕರ್ಷೆಗಳು, ನಿಲುವುಗಳು ತಮ್ಮೆಲ್ಲ ತೀವ್ರತೆಯ ನಡುವೆಯೂ ಪೂರ್ವನಿರ್ಧಾರಿತವಾಗಿದ್ದು ವಿಮರ್ಶೆಯ ಶಿಸ್ತನ್ನು ಕೆಲಮಟ್ಟಿಗೆ ನೀಗಿಸಿಕೊಳ್ಳುತ್ತವೆ. 'ಭಕ್ತಿ ಸಾಹಿತ್ಯದಲ್ಲಿ ಪ್ರತಿಭಟನೆಯ ವಿಧಾನ' (೧೯೮೫, ಸಾಹಿತ್ಯ ಮತ್ತು ಪ್ರತಿಭಟನೆಯಲ್ಲಿ) ಎಂಬ ಸುದೀರ್ಘ ಪ್ರಬಂಧದಲ್ಲಿ ಭಕ್ತಿ ಸಾಹಿತ್ಯ ಚಳವಳಿಯ ಪ್ರಗತಿಪರ ಮೌಲ್ಯಗಳನ್ನು ದ್ವಂದ್ವಾತ್ಮಕವಾಗಿ ಶೋಧಿಸಲು ತೊಡಗದೆ ಜಾತಿ ಹಿನ್ನೆಲೆಯಲ್ಲಿ ಸಂಧಿಸುತ್ತಾರೆ: ಹಾಗೆಂದೇ ಈ ಅಧ್ಯಯನ ವಿಧಾನ ಅವರ ತೀರ್ಮಾನಗಳನ್ನು ನಕಾರಾತ್ಮಕ ನೆಲೆಗೆ ತಲುಪಿಸುತ್ತವೆ: 'ಭಕ್ತಿಪಂಥ ದುರ್ಬಲ ವರ್ಗದ ಮೇಲೆ ನಡೆದ ಪ್ರತಿಭಟನೆಯ ಧಾಳಿ' ಎಂಬ ತೀರ್ಪು ಕೊಡುವುದು (ಪು. ೬೫) ಅವರಿಗೆ ಸುಲಭವಾಗುತ್ತದೆ.

೭೦ರ ದಶಕದಲ್ಲಿ ಸಮರ್ಥ ವಿಮರ್ಶೆ ಬೆಳೆಯದಿದ್ದುದಕ್ಕೆ ಕನ್ನಡದ ಸಮಗ್ರ ಪರಂಪರೆಯನ್ನು ಗ್ರಹಿಸಬಲ್ಲ, ಉಪಯೋಗಿಸಬಲ್ಲ ವಿಮರ್ಶಕರ ಸಂಖ್ಯೆ ವಿರಳವಾಗಿದ್ದುದು ಕಾರಣವೆನ್ನುವ ಜಿ. ಎಸ್. ಆಮೂರರು (೧೯೮೨, ದಶವಾರ್ಷಿಕ ಸಮೀಕ್ಷೆಯಲ್ಲಿ, ಪು. ೪೯) ಎಲ್ಲ ಪಂಥಗಳ ಶ್ರೇಷ್ಠ ಕಲಾಕೃತಿಗಳನ್ನು ಅವುಗಳ ಅಂತಸ್ಸತ್ವಕ್ಕೆ ಚ್ಯುತಿ ಬರದಂತೆ ಗುರುತಿಸುತ್ತಾರಲ್ಲದೆ, ಅವುಗಳನ್ನು ಕನ್ನಡ ಪರಂಪರೆಯ ಸಂದರ್ಭದಲ್ಲಿ ಸರಿಯಾದ ಜಾಗದಲ್ಲಿಡಲು ಪ್ರಯತ್ನ ನಡೆಸುತ್ತಾರೆ (೧೯೮೮). ಆದರೆ, ಇವರ ವಿಮರ್ಶೆಯ ಸಂದರ್ಭದಲ್ಲಿ ಇವರು ಪರಂಪರೆಯ ಬಗೆಗೆ ಖಚಿತವಾದ, ವೈಜ್ಞಾನಿಕವಾದ ಧೋರಣೆಯನ್ನು ಪ್ರಕಟಿಸಿದ್ದಾರೆ ಎಂದೇನೂ ಅನಿಸುವುದಿಲ್ಲ. ಹೊಸಗನ್ನಡದ ಪ್ರಮುಖ ಕೃತಿಗಳನ್ನು—ಮುಖ್ಯವಾಗಿ ಕಾದಂಬರಿಗಳು—ವಿಶ್ಲೇಷಿಸಿ ಅವುಗಳ ಮಹತ್ವದ ಅಂಶಗಳನ್ನು ಪ್ರಸ್ತಾಪಿಸುತ್ತಾರೆಯೇ ವಿನಾ ಆಳವಾಗಿ ಬೆದಕದೆ, ವಿವರವಾಗಿ ವಿಶದಗೊಳಿಸದೆ ಹೇಗೆ ಕೈಬಿಡುತ್ತಾರೆ ಎನ್ನುವುದಕ್ಕೆ 'ಆಧುನಿಕ ಕನ್ನಡ ಕಾದಂಬರಿಯ ಬೆಳವಣಿಗೆ', 'ಕನ್ನಡದ ಹತ್ತು ಶ್ರೇಷ್ಠ ಕಾದಂಬರಿಗಳು', 'ಚದುರಂಗರ ಕಾದಂಬರಿಗಳು'ದಂಥ ಲೇಖನಗಳು ಒಳ್ಳೆಯ ದೃಷ್ಟಾಂತಗಳು. ತರುಣ ಲೇಖಕರ ಬಗ್ಗೆ (ಉದಾ: ದೇವನೂರು) ಕುತೂಹಲದಿಂದ ಮುಕ್ತ ಮನಸ್ಸಿನಿಂದ ಅಭಿಪ್ರಾಯ ನೀಡುವ ಆಮೂರರು ಪರಂಪರೆಯ ಬಗ್ಗೆ ಹೊಂದಿರುವ ಕಲ್ಪನೆ ಪೂರ್ವಾಗ್ರಹ ದೂರವಾಗದಿರುವುದೇಕೆ ಎಂದು ತಿಳಿಯುವುದಿಲ್ಲ. 'ಕನ್ನಡದ ಹತ್ತು ಶ್ರೇಷ್ಠ ಕಾದಂಬರಿಗಳು' ಎಂಬ ಲೇಖನದಲ್ಲಿ ಅವರ ಶ್ರೇಷ್ಠತೆಯ ಮಾನದಂಡ ಎಷ್ಟು ದೋಷಪೂರ್ಣವಾದುದೆಂದರೆ ಅವರ ಶ್ರೇಷ್ಠತೆಯ ಪಟ್ಟಿಯಲ್ಲಿ 'ಗ್ರಾಮಾಯಣ'

'ಸಂಸ್ಕಾರ' 'ಮೃತ್ಯುಂಜಯ'ಗಳಿಗೆ ಪ್ರವೇಶದ ಅರ್ಹತೆಯೇ ಇಲ್ಲ. ಪರಂಪರೆಯ ರೇಖಿಸುವಿಕೆಯಲ್ಲಿ, ಪರಂಪರೆಯ ಹಿನ್ನೆಲೆಯಲ್ಲಿ ನಿರ್ದಿಷ್ಟಕೃತಿಯನ್ನಿಟ್ಟು ಬೆಲೆಗಟ್ಟು ವುದರಲ್ಲಿ, ಹಿರಿಯ ವಿಮರ್ಶಕರಾಗಿ ನಮ್ಮ ಮುಂದಿರುವ ಹೊಣೆಯ ಅಗಾಧತೆ ಯನ್ನು ಮನವರಿಕೆ ಮಾಡಿಸಲು ಮಾತ್ರ.

O

ಇದೀಗ ಪ್ರಸ್ತುತ ಕನ್ನಡ ವಿಮರ್ಶೆ ಎದುರಿಸುತ್ತಿರುವ ಬಿಕ್ಕಟ್ಟಿನ ಕೆಲವು ಪ್ರಮುಖ ಮಾದರಿಗಳನ್ನು ಪರಿಶೀಲಿಸೋಣ.

ಮೊದಲನೆಯದಾಗಿ, ವಿಮರ್ಶೆಯಲ್ಲಿ ಹೆಚ್ಚುತ್ತಿರುವ ಜಾತಿ ರಾಜಕೀಯ ಮತ್ತು ವ್ಯಕ್ತಿನಿಷ್ಠತೆ. ಸಾಹಿತ್ಯ ಕ್ಷೇತ್ರದಲ್ಲಿನ ಜಾತಿರಾಜಕೀಯ ಒಂದು ಅನಿಷ್ಟ ಪ್ರವೃತ್ತಿಯಾಗಿ ನವ್ಯ ಯಾಕೆ, ನವೋದಯ ಕಾಲದಿಂದ ಬೆಳೆದು ಬಂದುದೇ ಆದರೂ, ಈ ಪ್ರವೃತ್ತಿ ಈಚಿನ ದಿನಗಳಲ್ಲಿ ತೀರಾ ಅಸಹ್ಯಕರವಾಗುತ್ತಿರುವುದನ್ನು ಕಡೆಗಣಿಸು ವಂತಿಲ್ಲ. ಭಾಷಾ ಮಾಧ್ಯಮದಲ್ಲಿ ಸಾಕಾರ ಪಡೆಯಬೇಕಾದ ಒಂದು ಸಾಹಿತ್ಯಕೃತಿ ಸಾಮಾಜಿಕ ಉಪವಸ್ತುವಾಗಿದ್ದು, ಅದರ ಬಳಕೆಯ ನ್ಯಾಯಬದ್ಧವಾದ ನೆಲೆಗಟ್ಟು ವಿಮರ್ಶಕನ ಪಾಲಿಗೆ ಆಕೃತಿ ನಿಷ್ಠ ಧೋರಣೆಯೇ ಆಗಿದೆ. ಆದರೆ, ಇಂದು ವ್ಯಕ್ತಿ ನಿಷ್ಠ ವಿಮರ್ಶೆ ಕೃತಿಯಿಂದ ಎಷ್ಟು ದೂರ ಹೋಗಿಬಿಟ್ಟಿದೆ ಎಂದರೆ ಇಡಿಯ ವಿಮರ್ಶೆಯಲ್ಲಿ 'ಕೃತಿ' ಒಂದು ನಿಮಿತ್ತ ಮಾತ್ರವಾಗಿದೆ; ಕೃತಿಯೇತರ ಅಂಶಗಳಿಗೆ ವಿಮರ್ಶಕನ 'ನಿಷ್ಠೆ' ಸಲ್ಲುತ್ತಿದೆ. ವ್ಯಕ್ತಿಯ, ಕೃತಿಕಾರನ ಜೀವನ — ವೃತ್ತಿಪರ ಸಾಧನೆ, ಕೃತಿಕಾರ ವಿಮರ್ಶಕನ ಸಂಬಂಧ, ಸಲುಗೆ, ಸಜಾತಿ ಪ್ರೇಮ, ಮುಂತಾದವುಗಳ ಭಾವನಾತ್ಮಕ ನಿರೂಪಣೆಯೇ ವಿಮರ್ಶಕನ 'ಶಿಷ್ಟತೆ', 'ವಿನಯ' ವೆನಿಸುತ್ತಿದೆ. ಅಥವಾ ದಲಿತರು ಇಲ್ಲವೇ ಅಲ್ಪಸಂಖ್ಯಾತರು ಬರೆದುದೆಂಬ ಒಂದೇ ಕಾರಣಕ್ಕೆ ಕೃತಿಯನ್ನು ಉತ್ಪ್ರೇಕ್ಷಿಸಿ ಬರೆಯುವುದೇ ವಿಮರ್ಶಕನ 'ಪ್ರಗತಿ ಪರತೆ' ಯೆನಿಸಿಕೊಳ್ಳುತ್ತಿದೆ. ಇದರ ಇನ್ನೊಂದು ಮುಖ ಪ್ರತಿಷ್ಠಿತ ಸಾಹಿತಿಗಳನ್ನು ಒಪ್ಪಿಸಲಿಕ್ಕಾಗಿ, ಅವರ ಕೃತಿಗಳ ದೋಷವನ್ನು ಬೇಕೆಂದೇ ಮರೆಮಾಚುವ ಅಥವಾ ಹಗುರಾಗಿ ತೆಗೆದುಕೊಳ್ಳುವ ವಿಮರ್ಶಕ ವರ್ಗಗಳ ಪ್ರವೃತ್ತಿ. ಉದಾ.ಗೆ, ಕಂಬಾರರ 'ಸಿಂಗಾರೆವ್ವ ಮತ್ತು ಅರಮನೆ', ಎಮಿಲಿ ಬ್ರಾಂಟೆಯ ಜನಪ್ರಿಯ ಕಾದಂಬರಿ ವುದರಿಂಗ್ 'ಹೈಟ್ಸ್'ನ ಭಾವಾನುವಾದ ಎನ್ನುವಷ್ಟು ಸಾದೃಶ್ಯ ಹೊಂದಿದ್ದರೂ ವಿಮರ್ಶಕರು ಈ ಕೃತಿಯ ವಿಮರ್ಶೆಯ ಸಂದರ್ಭದಲ್ಲಿ ಇದನ್ನು ದಾಖಲಿಸುವುದೇ ಇಲ್ಲ (ನೋಡಿ: ೧೯೮೬, ಟಿ. ಪಿ. ಅಶೋಕ ಸಾಹಿತ್ಯ ಸಂಪರ್ಕದಲ್ಲಿ, ಪು. ೧೫೫-೧೫೭) ಕೃತಿಯನ್ನು (ಅದರ ಅನುಭವ ಮೂಲವನ್ನು ಕೂಡ) ಮರೆತು ಇತರೇ ಉಪಾಧಿ ಗಳನ್ನು ಕುರಿತು ಬರೆಯುವ ಇಂಥ ವಿಮರ್ಶೆ ವಿಮರ್ಶಕನ 'ಶಿಷ್ಟತೆ'ಯೋ ? ಇತಿಹಾಸ ಮತ್ತು ಸಮಕಾಲೀನ ಸಂದರ್ಭದಲ್ಲಿ ನಿರ್ದಿಷ್ಟ ಕೃತಿಯೊಂದರ ಆಕೃತಿಯ

ಅನನ್ಯತೆಯನ್ನು ಗುರುತಿಸಿ ಅವರ ಸ್ಥಾನ ನಿರ್ದೇಶಿಸ ಮಾಡಲಾರದ ವಿಮರ್ಶಕ ಹೊಣೆಗೇಡಿ ಎನ್ನಬೇಕು. ನಮ್ಮ ಹಿರಿಯ ವಿಮರ್ಶಕರು, ಅಂಕಣಕಾರರು, ಪ್ರಾಧ್ಯಾಪಕರು ವಿಮರ್ಶೆಯನ್ನು 'ಖಾಸಗಿ'ಯಾಗಿ—ಅಂದರೆ ಆರತಿ ಅಕ್ಷತೆಗೆ ಹೋಗಿ ಅಕ್ಕಿಕಾಳು ಎರಚಿ ಶುಭ ಹಾರೈಸುವ ರೀತಿ – ತೆಗೆದುಕೊಂಡಿರುವುದು, ವಸ್ತುನಿಷ್ಠ ನಿರ್ಭಿಡೆಯ ವಿಮರ್ಶಕರಿಗೆ ಹಾಗೂ ಅಂಥ ಮುಕ್ತ ವಿಮರ್ಶೆಯ ವಾತಾವರಣ ನಿರ್ಮಾಣ ಮಾಡಬೇಕೆನ್ನುವವರಿಗೆ ತೀರಾ ಆತಂಕಕಾರಿಯೆನಿಸಿದೆ. ಅಕ್ಷರ ಮಾಧ್ಯಮದ ಬೆಲೆಯನ್ನು ತಿಳಿಯದೆ ಬಾಯುಪಚಾರದ ಮಾತುಗಳನ್ನು ಬರೆಯುವುದು ನಿಲ್ಲದಿದ್ದರೆ ಪೋಲಂಕಿ—ಕಲ್ಬುರ್ಗಿ—ಭಗವಾನ್ ಮುಂತಾದವರಿಗೆ ಒದಗಿದ ಪಾಡು ಈ ನಾಡಿನಲ್ಲಿ ನಿತ್ಯಘಟನೆಯಾಗಿ ಬಿಡುತ್ತದೆ. ಕವಿರಾಜ ಮಾರ್ಗಕಾರ ಹೇಳುವ 'ಕಸವರಮೆಂಬುದು ನೆರೆ ಸೈರಿಸಲಾರ್ಪೊಡೆ ಪರವಿಚಾರಮುಂ ಧರ್ಮಮುಂ' ಎಂಬಲ್ಲಿನ ಪರವಿಚಾರವನ್ನು ಸೈರಿಸುವ, ಗೌರವಿಸುವ ಮೌಲ್ಯವನ್ನು, ನಮ್ಮ ಜನತೆ ಕಾದಿಟ್ಟುಕೊಂಡು ಬರುವಂತಹ ವಾತಾವರಣವನ್ನು ಸೃಷ್ಟಿಸುವುದು ಅಕ್ಷರ ಮಾಧ್ಯಮವನ್ನು ಬಳಸುವ ಪ್ರತಿಯೊಬ್ಬನ ಕರ್ತವ್ಯವಾಗಬೇಕು : ವಿಮರ್ಶಕನ ವ್ರತವಾಗಬೇಕು.

ವಿಮರ್ಶಕ ಬೇರೆ ಸಂಶೋಧಕ ಬೇರೆ ಎಂದು ನಾನು ತಿಳಿದಿಲ್ಲ. ವಿಮರ್ಶಕನೊಳಗಣ ಸಂಶೋಧಕ, ಕೃತಿಯ ಆಶಯ ಮತ್ತು ಬಂಧಗಳ ಅನನ್ಯತೆಯನ್ನು ನಿಗಮನ ರೀತ್ಯಾ (ಡಿಡಕ್ಟಿವ್ ಆಗಿ) ಶೋಧಿಸುವ ಸೂಕ್ಷ್ಮ ಪ್ರತಿಭೆಯನ್ನು ಹೊಂದಿರಬೇಕು. ನಮ್ಮ ಪ್ರಮುಖ ಸಾಹಿತ್ಯ ಕೃತಿಗಳ ಕುರಿತಾದ ವಿಮರ್ಶೆಯ ಸ್ವರೂಪ, ಅವು ತಳೆಯುವ ನಿಲುವುಗಳೊಳಗಣ ವೈರುಧ್ಯವನ್ನು ಗಮನಿಸಿ ಈ ಮಾತನ್ನು ಮತ್ತೆ ಮತ್ತೆ ಉಚ್ಚರಿಸಬೇಕಾಗಿದೆ. 'ಚೋಮನದುಡಿ'ಯಲ್ಲಿ ಲೇಖಕನ ಜಾತಿ ಹಾಗೂ ದಲಿತ ಸಂವೇದನೆಯ ಚಿತ್ರಣದ ಅಥೆಂಟಿಸಿಟಿಯ ಬಗ್ಗೆ ಸುಮಾರು ಒಂದೂವರೆ ದಶಕದಿಂದಲೂ ನಡೆಯುತ್ತಾ ಬಂದಿರುವ ವಾದಕ್ಕೆ ಇನ್ನೂ ತೆರೆಬಿದ್ದಿಲ್ಲ. ಪೌರ್ವಾತ್ಯ ಪಾಶ್ಚಿಮಾತ್ಯ ಸಾಹಿತ್ಯ ವಿಮರ್ಶಾ ತತ್ವಗಳನ್ನು ತೌಲನಿಕವಾಗಿ ವ್ಯುತ್ಪತ್ತಿ ಪೂರ್ಣವಾಗಿ ಅಭ್ಯಾಸ ಮಾಡಿರುವ ಜಿ. ಎಸ್. ಶಿವರುದ್ರಪ್ಪರಂಥ ಹಿರಿಯ ವಿಮರ್ಶಕರೂ ಕೂಡ '....ಚೋಮನ ವರ್ಗದವನೇ ಆದ ಮತ್ತು ತಕ್ಕ ಪ್ರತಿಭಾಶಾಲಿಯಾದ ಬರಹಗಾರನೊಬ್ಬ, ಚೋಮನ ಬದುಕನ್ನು ಕುರಿತು ಕಾದಂಬರಿಯನ್ನು ಬರೆದರೆ, ಅದು ಖಂಡಿತವಾಗಿಯೂ ಕಾರಂತರ 'ಚೋಮನದುಡಿ'ಗಿಂತಲೂ ಭಿನ್ನವಾದ ಸಾಮಾಜಿಕ ವಾಸ್ತವಗಳನ್ನು ಸಾಚಾತನಗಳನ್ನೂ ಪ್ರಕಟಿಸುವ ಸ್ವರೂಪದ್ದಾಗಿರುತ್ತದೆ....' (೧೯೮೯, ಸಾಹಿತ್ಯ ಮತ್ತು ಸಾಮಾಜಿಕ ನಿಲುವು, ಪು. ೧೪೯-೧೫೦) ಎಂಬ ನಿಲುವು ಇನ್ನೂ ಉಳಿಸಿಕೊಂಡಿರುವುದು ಆಶ್ಚರ್ಯ ಹುಟ್ಟಿಸುತ್ತದೆ. ಈ ವಾದವೇ ಅಸಾಹಿತ್ಯಿಕ ನೆಲೆಯಿಂದ ಎದ್ದು ಬಂದದ್ದಾಗಿದೆ. ಈ ವಾದವನ್ನು ನಿರಾಕರಿಸುವ ಭೂಮಿಕೆ ಕೃತಿಯೊಳಗೇ ಇದೆ ಎಂಬುದನ್ನು ಸೂಕ್ಷ್ಮ ಓದಿನ ಮೂಲಕ

ಹಾಗೂ 'ಚೋಮನದುಡಿ' ಸೃಷ್ಟಿಯಾದ ಕಾಲದ ಕುರಿತಾದ ಐತಿಹಾಸಿಕ ಪರಿಭಾವನೆಯು ಮೂಲತಃ ಎತ್ತಿ ತೋರಿಸಬಹುದು. ವಸಾಹತುಶಾಹಿ ಶೋಷಣೆ, ವಿಸ್ಫೋಟಗಳ ಉದಯದೊಂದಿಗೆ ಸಮಾಜದ ಎಲ್ಲ ಸ್ತರಗಳಲ್ಲಾದ ಮೂಲಭೂತ ಪಲ್ಲಟದ ಪ್ರಥಮ ನಿರೂಪಣೆ ಪ್ರಪ್ರಥಮವಾಗಿ 'ದುಡಿ'ಯಲ್ಲಿ ಮೂಡಿಬಂದಿದೆ ಎಂಬ ಐತಿಹಾಸಿಕ ಸತ್ಯಕ್ಕೆ ವಿಮರ್ಶಕ ಕುರುಡಾಗಕೂಡದು. ಕಾರಂತರು ಯಾವ ಪನ್ನು ವಾಸ್ಯಗೊಳಿಸದೆ (—'ಅಸ್ಪೃಶ್ಯ'ದ ಆನಂದರಂತೆ ವ್ಯಾಖ್ಯಾನಪರರಾಗದೆ) ಭೂಮಿಯ ಒಡೆತನವಿಲ್ಲದಿರುವುದಕ್ಕೂ ಚೋಮನ ಬಡತನ ಮತ್ತು ಆತನ ಜಾತಿ ಮೂಲದ ಅವಮಾನಕ್ಕೂ ಸಂಬಂಧ ಕಲ್ಪಿಸಿರುವುದು ಚಾರಿತ್ರಿಕ ವಾಸ್ತವದ ಕಲಾತ್ಮಕ ಆವೃತ್ತಿಯಾಗಿದೆ. ತನ್ನ ಕಿರುಗಾತ್ರದಲ್ಲಿ 'ದುಡಿ' ತಬ್ಬಿಕೊಳ್ಳುವ ವಸ್ತುವಿನ ಅಗಾಧತೆ, ಗಹನತೆ ಕೂಡ ಚೋಮನ ಪಾತ್ರವನ್ನು ತನ್ನ ಸಮಸ್ಯೆಯಿಂದ ಪಾರಾಗಲಿಚ್ಛಿಸುವ ಆತನ ಸಾಮಾಜಿಕ ಸ್ತರದ ಮೂಲಮಾತೃಕೆಯನ್ನಾಗಿಸುತ್ತದೆ. ಆತನ ಭೂಮಿಯ ವ್ಯಾಮೋಹಕ್ಕೆ ಅರ್ಥವಂತಿಕೆ ಪ್ರಾಪ್ತವಾಗುವುದು ಆತ ತನ್ನ ಮಕ್ಕಳ ಹಾಗೆ ನೆಲದಲ್ಲಿ ಬೇರು ಕಳಕೊಳ್ಳದಿರುವುದರಲ್ಲಿ. 'ಚೋಮನ ವರ್ಗದವ'ರೇ ಬರೆದಾಗ 'ಗುಡಿಸಲುಗಳು ಗುಡುಗುತಿವೆ/ಬಂಗಲೆಗಳು ನಡುಗುತಿವೆ' ಎಂಬ ಅವಾಸ್ತವಿಕ ಉದ್ಘೋಷ ಕೂಡ ಹೊರಡುವ ಸಾಧ್ಯತೆಯಿರುವುದನ್ನು ನಮ್ಮ ವಿಮರ್ಶಕರು ಅಲಕ್ಷಿಸುವುದು ವಿಮರ್ಶೆಯ ವಾತಾವರಣದಲ್ಲಿ 'ಪಾಕ್ಷಿಕತೆ'ಯು ರಾಡಿಯೆಬ್ಬಿಸಿದಂತಾಗುವುದಿಲ್ಲವೆ ?

'ಅಸ್ಪೃಶ್ಯ-ಶೂದ್ರ' dichotomyಯು ಸೌಮ್ಯೋಕ್ತಿಯೋ (Euphemism) ಆಗಿರುವ ಈ 'ಒಳಗಿನ' 'ಹೊರಗಿನ' ಎಂಬ ಪ್ರಾಂತೀಕರಣ ಹೀಗೇ ಮುಂದುವರಿದರೆ ವಿಮರ್ಶಾಕ್ಷೇತ್ರದಲ್ಲೂ ದಲಿತರ ಕೃತಿಗಳನ್ನು ದಲಿತರು, ಮಹಿಳೆಯರ ಕೃತಿಗಳನ್ನು ಮಹಿಳೆಯರು, ಅಲ್ಪಸಂಖ್ಯಾತರ ಕೃತಿಗಳನ್ನು ಅಲ್ಪಸಂಖ್ಯಾತರು, ನನ್ನ ಕೃತಿಯನ್ನು ನಾನು....ವಿಮರ್ಶಿಸುವುದೇ ಸರಿಯಾದ ವಿಮರ್ಶಾ ಮಾದರಿ ಎನಿಸಿಕೊಳ್ಳುವ ದಿನ ದೂರವಿಲ್ಲವೆನಿಸುತ್ತದೆ. (ಈ ವಾದ (ಒಳಗು ಹೊರಗಿನ ದ್ವಂದ್ವ) ದಲಿತ ಅನುಭವ ಮತ್ತು ಭಾಷಾಲಯದ ಸಹಜತೆ—ಅಸಹಜತೆ ಹಾಗೂ ವಾತಾವರಣ ನಿರ್ಮಾಣಕ್ಕೆ ಸಂಬಂಧಿಸಿ ಹುಟ್ಟಿದ್ದೇ ಆಗಿದ್ದರೆ ಕೆಲಮಟ್ಟಿಗೆ ಒಪ್ಪಬಹುದಾಗಿತ್ತು). ಈ ವಾದ ತಳರಹಿತವಾದುದೆಂಬುದಕ್ಕೆ ಸ್ವತಃ ದಲಿತರಾದ ಡಾ|| ಮನುಜ ಅವರು ದಲಿತ ಕೃತಿಗಳನ್ನು ವಿಮರ್ಶಿಸುವ ರೀತಿಯೇ ಒಂದು ಜ್ವಲಂತ ನಿದರ್ಶನವಾಗಬಲ್ಲದು. ದೇವನೂರರ ಕೃತಿಗಳ ಶ್ರೇಷ್ಠತೆಯನ್ನು ಅಲ್ಲಗಳೆಯುವ ಉದ್ದೇಶ ಮೊದಲಿಂದಲೇ 'ವಿಮರ್ಶೆ' ಬರೆಯುತ್ತಾರೋ ಎಂಬ ಸಂದೇಹ ಮನುಜ ಅವರ ಬರಹಗಳನ್ನು ಓದಿದ ಕೂಡಲೇ ಮೂಡುತ್ತಿರುತ್ತದೆ. ದಲಿತ ಲೇಖಕರಲ್ಲಿ ಕಥೆ

ಸಾಧನೆಯು ಕೃತಿಗಳನ್ನು ಅವರು ಹಾಡಿಹೊಗಳುವ ಅತಿಯಲ್ಲಿ ಇದು ಇನ್ನಷ್ಟು ಕಣ್ಣಿಗೆ ಹೊಡೆಯುತ್ತದೆ (೧೯೮೬, 'ಸಾಮಾಜಿಕ ಸಂದರ್ಭ ಮತ್ತು ಬಂಡಾಯ', ಸಾಹಿತ್ಯ ವಿಮರ್ಶೆ)

ಕೃತಿಯನ್ನು ನಿಮಿತ್ತ ಮಾತ್ರವಾಗಿ ಸಂಧಿಸುವ ಈ ಬಗೆಯ ವಿಮರ್ಶಾ ಧೋರಣೆ ನಮ್ಮ ಸಾಹಿತ್ಯ ಪರಂಪರೆ ಮತ್ತು ನೇರವಾಗಿ ಹೇಳುವುದಾದರೆ ನಿರ್ದಿಷ್ಟ ಅನುಭವ ದ್ರವ್ಯದ ಮಾದರಿಯೊಂದರ ಸಾತತ್ಯದ ಖಚಿತ ಗ್ರಹಿಕೆಯೇ ಗೈರು ಹಾಜರಾದ ಸ್ಥಿತಿಯಲ್ಲಿ ಮಾತ್ರ ಚಲಾವಣೆಯಲ್ಲಿರಲು ಸಾಧ್ಯ ಅನಿಸುತ್ತದೆ. ಕುರ್ತಕೋಟಿ ಅವರ 'ನಡೆದು ಬಂದ ದಾರಿ'ಯಂಥ, ಪರಂಪರೆಯನ್ನು ಬಗೆಯುವ ಶ್ರದ್ಧಾಪೂರ್ಣ ಸಾಹಸೀ ಉಪಕ್ರಮ ಈಚಿನ ದಿನಗಳಲ್ಲಿ ನಡೆಯದಿರುವುದು, ಮಾರ್ಕ್ಸ್‌ವಾದಿ ವಿಶ್ಲೇಷಣೆ ಎಂಬ ಹೆಸರಿನಲ್ಲಿ ಬಂದ ಸಿ. ವೀರಣ್ಣ ಅವರ ಗ್ರಂಥ 'ಕೆಟ್ಟ ಪಠ್ಯಪುಸ್ತಕ'ವಾಗಿ ಬಿಟ್ಟಿರುವುದು, ಹೊಸದೃಷ್ಟಿ ಮತ್ತು ಪರಂಪರೆಗಳ ನಡುವಣ ಅಗಾಧ ಬಿರುಕು ಉಳಿದುಬಂದುದನ್ನೇ ವ್ಯಂಜಿಸುತ್ತದೆ. 'ಪರಂಪರೆಯ ಪುನರ್ ಮೌಲ್ಯೀಕರಣ'ದ ಘೋಷಣೆ ಹಾಕಿದ ಬಂಡಾಯದವರೂ ಸ್ವತಃ ಹಳಗನ್ನಡ—ನಡುಗನ್ನಡ ಕೃತಿಗಳ ಬಗ್ಗೆ ಉಲ್ಲೇಖನೀಯವಾದ ಅಧ್ಯಯನಕ್ಕೇ ಕೈ ಹಾಕದಿರುವುದನ್ನು ಗಮನಿಸಿದರೆ ಪರಂಪರೆಯೊಂದಿಗಿನ ಅವರ ಬೆಸುಗೆ ಅಷ್ಟೇನೂ ಬಿಗಿಯಾದುದಲ್ಲ ಎಂಬುದೇ ಹೊರಪಡುತ್ತದೆ.

ದಲಿತ ಪಾತ್ರಗಳು, ದಲಿತ ಬದುಕನ್ನು ವಸ್ತುವಾಗಿರಿಸಿಕೊಂಡು ಬಂದ ನಮ್ಮ ಆಧುನಿಕ ಸಾಹಿತ್ಯಕೃತಿಗಳ ಚಾರಿತ್ರಿಕ ಅಧ್ಯಯನ, ಲೇಖಕರುಗಳ ನಡುವಣ ನಿಲುವಿನಲ್ಲಿನ ಬದಲಾವಣೆಗಳು, ವೈರುಧ್ಯಗಳು ಮುಂತಾದವುಗಳ ದ್ವಂದ್ವಾತ್ಮಕ ಅಧ್ಯಯನ ನಮ್ಮಲ್ಲಿನ್ನೂ ನಡೆದಿಲ್ಲ. ದಲಿತಪರ ಸಂವೇದನೆಯ ಬೆಳವಣಿಗೆಯ ಚಿತ್ರಣ ನಮ್ಮ ಆಧುನಿಕ ಸಾಹಿತಿಗಳಲ್ಲಿ ರಾಜಮಾಡೆ, ಕೊರಸ್ಕಲ್, ಭಾರತೀಸುತ, ನಿರಂಜನ, ಅನಕೃ, ತಚ್ಚೀಮನಿ, ಕಾರಂತ, ಕುವೆಂಪು, ಬೇಂದ್ರೆ, ದೇವನೂರು, ಮನಜ, ಮೊಗಳ್ಳಿ ಮುಂತಾದವರಿಂದ ಬಂದಿರುವ ಹಾಗೆ ಹಿಂದಿಯಲ್ಲಿ ಮೂವತ್ತರ ದಶಕದಲ್ಲೇ ಪ್ರೇಮಚಂದರಂಥವರಿಂದ ಕೂಡ ಅಷ್ಟೇ ಪ್ರಭಾವಿಯಾಗಿ ಮೂಡಿಬಂದಿರುವುದನ್ನು ಸ್ಮರಿಸಬೇಕು. ಪರಂಪರೆಯ ಸಾಹಿತ್ಯದ ಖಚಿತ ಗ್ರಹಿಕೆಯೊಂದಿಗೆ ನಿರ್ದಿಷ್ಟ ಕೃತಿ ಆ ಪರಂಪರೆಯೊಳಗೇ ಇನ್ನೊಂದು ಪರಂಪರೆಗೆ ದಾರಿ ಮಾಡಿಕೊಡಬಹುದಾದ ಸಾಧ್ಯತೆಯ ಆವಿಷ್ಕಾರದ ಬಗೆಗೆ ಇಂದಿನ ವಿಮರ್ಶೆ ಕಾರ್ಯಪ್ರವೃತ್ತವಾಗಬೇಕು. ನನ್ನ ದೃಷ್ಟಿಯಲ್ಲಿ, ದಲಿತರ ಸಂಸ್ಕಾರದ ಕುರಿತಾದ ಮೊಗಳ್ಳಿ ಅವರ 'ಕಾರ್ಯ'ವನ್ನು ನವ್ಯದ 'ಸಂಸ್ಕಾರ' ಮತ್ತು 'ಮಣ್ಣು'ವಿನೊಂದಿಗೆ, ಚಿನುವಾ ಆಚಿಬೆಯ 'Things Fall Apart'ನೊಂದಿಗೆ ಜೊತೆಜೊತೆಯಾಗಿಟ್ಟು ನೋಡುವುದು,

ಇಂಥದೊಂದು ವಸ್ತುವಿಗೆ ಏರ್ಪಟ್ಟಿರುವ ಪರಂಪರೆಯೊಂದಿಗಿನ ನಮ್ಮ ಅರ್ಥಪೂರ್ಣ ಸ್ಪಂದನ–ಸಂವಾದಗಳ ಸ್ವೀಕೃತಿಯೇ (acknowledgement) ಆಗಿದೆ. 'ಕಾರ್ಯ' ಶ್ರೇಷ್ಠವೋ ಕನಿಷ್ಠವೊ ಇಲ್ಲಿ ನನಗೆ ಮುಖ್ಯವಲ್ಲ—ಇದೂ ಕೂಡ ಇಂಥ ವಿಮರ್ಶಾ ವಿಧಾನದಿಂದಲೇ ನಿರ್ಧಾರಗೊಳ್ಳಬೇಕಾದುದು- ಥಕ್ಕನೆ ನೆನಪಿಗೆ ಬಂದುದ ರಿಂದ ಇದನ್ನಿಲ್ಲಿ ಉದಾಹರಿಸಿದ್ದೇನೆ). ಇಂಥ ಸಂವಾದದ ಫಲವಾಗಿ ಮೂಡಿನಿಲ್ಲುವ ನಿರ್ದಿಷ್ಟ ಕೃತಿಯ ಕುರಿತಾದ ನಮ್ಮ ಅಭಿಪ್ರಾಯ, ತೀರ್ಮಾನಗಳು ಹೆಚ್ಚು ಪ್ರಮಾಣ ಭೂತವಾಗಬಲ್ಲುವು. ನಾವು ಕಟ್ಟಬೇಕಾದ ಪರಂಪರೆಯ ಮುಂಗಾಣ್ಕೆ ಮತ್ತು ಆ ಹೊಣೆಯ ಸಮರ್ಥ ನಿರ್ವಹಣೆ ಮೂಲಕ ಮಾತ್ರ ವಿಮರ್ಶಕರಾಗಿ ನಾವು 'ವಿನಯ' ವನ್ನು (ಜಿ.ಎಚ್. ನಾಯಕರ ಪರಿಕಲ್ಪನೆ) ರುಜುವಾತುಪಡಿಸಬಹುದಷ್ಟೆ.

ದಲಿತ ಸಂವೇದನೆಯ ಕೃತಿಗಳಿಗಿರುವ ಪರಂಪರೆಯ ಸಾತತ್ಯವನ್ನು ಗ್ರಹಿಸಿ ವಿಮರ್ಶೆಗಿಳಿಯಬೇಕು ಎಂದು ನಾನು ಹೇಳುವ ಮಾತು; ಇಡಿಯ ಸಾಹಿತ್ಯ ಪರಂಪರೆಯ ಪ್ರಕ್ರಿಯಾತ್ಮಕ ಹಿನ್ನೆಲೆಯಲ್ಲಿ ನಮ್ಮ ನಾಳಿನ ವಿಮರ್ಶಾಧೋರಣೆ ಗಳನ್ನು ರೂಪಿಸಿಕೊಳ್ಳಬೇಕು ಎಂಬ ನನ್ನ ದೃಢವಾದ ನಿಲುವಿಗೆ ಅಂತಿಮವಾಗಿ ಸಂಬಂಧಿಸಿದ್ದೇ ಆಗಿದೆ. ಕನ್ನಡ ವಿಮರ್ಶಾಕ್ಷೇತ್ರದಲ್ಲಿ ಗಾಢವಾಗಿ ಚಿಂತನೆ ನಡೆಸಿರುವ ಕೆ. ವಿ. ನಾರಾಯಣರು ಈಗಾಗಲೆ ಈ ನಿಲುವನ್ನು ಎತ್ತಿಹಿಡಿದಿದ್ದಾರೆ. ಧ್ವನಿತತ್ವ ವನ್ನು ಆಧುನಿಕ ಪರಿಕಲ್ಪನೆಗಳನ್ನು ಮರುಚಿಂತನೆಗೆ ಒಳಪಡಿಸಿ, ಅವುಗಳನ್ನು ಯುಕ್ತ ವಾಗಿ ಅರ್ಥವಿಸಿಕೊಳ್ಳುವ (೧೯೮೮, ಧ್ವನ್ಯಾಲೋಕ) ಅವರ ವಿಮರ್ಶಾತ್ಮಕ ಎಚ್ಚರ ನನಗೆ ಅರ್ಥಪೂರ್ಣವೆನಿಸಿದೆ. ಇವೊತ್ತಿನ ವಿಮರ್ಶೆಗೆ ಪ್ರಗತಿಪರ ಪರ್ಯಾಯವಾಗಬಲ್ಲ 'ಕನ್ನಡ ಸಾಹಿತ್ಯವನ್ನೇ ಮುಖ್ಯವಾದ ಆಧಾರವನ್ನಾಗಿ ಇಟ್ಟುಕೊಂಡು ಒಂದು ಪರಂಪರೆಯನ್ನು ಕಲ್ಪಿಸುವ, ಅದರ ಬೆಳವಣಿಗೆಯ ವಿವಿಧ ಹಂತಗಳನ್ನು ಇಂದಿನ ಸಾಹಿತ್ಯದಲ್ಲೂ ಕಾಣುವ ಪ್ರಯತ್ನ' (೧೯೮೩, ಅಂಕಣ ೪-೪) ವಿಮರ್ಶಕನ ಅಗಾಧ ವ್ಯುತ್ಪತ್ತಿ ಪರಿಶ್ರಮಗಳನ್ನು ಮುನ್ ನಿರೀಕ್ಷಿಸುವಂಥಾದ್ದು. ಈ ಪರ್ಯಾಯದ ಸಾಧನೆಯಾದರೋ ಇತರ ಉಪಾಧಿಗಳಿಂದ ನಿರಪೇಕ್ಷವಾದುದಲ್ಲ. ನಮ್ಮ ಔಪಚಾರಿಕ ಶಿಕ್ಷಣದ ಸ್ವರೂಪ, ಅರೆಸರಕಾರಿ ಮತ್ತು ಖಾಸಗಿ ಸಾಹಿತ್ಯಿಕ ಸಂಘ ಸಂಸ್ಥೆಗಳ (ಉದಾ. ಕಸಾಪರಿ, ಕಸಾ ಅಕಾಡೆಮಿ ಇತ್ಯಾದಿ) ಕಾರ್ಯವೈಖರಿ, ಈ ಹಿನ್ನೆಲೆ ಯಿಂದ ಆಮೂಲಾಗ್ರವಾಗಿ ಪರಿವರ್ತನೆಗೊಳ್ಳಬೇಕಾಗುತ್ತದೆ. ಅದೇನಿದ್ದರೂ ನಾರಾಯಣರ ಈ ವಿಮರ್ಶಾತ್ಮಕ ವಿವೇಕ ಅವರು ವಿಮರ್ಶಿಸಿದ ಕೃತಿಗಳ ಮೌಲ್ಯ ವಿವೇಚನೆಯ ಸಂದರ್ಭದಲ್ಲಿ ಹಲವು ಸ್ವೋಪಜ್ಞ ನೋಟಗಳನ್ನು ನೀಡುವಂತಾಗಿದೆ. (ಇಷ್ಟಾದರೂ ಅವರು ತಮ್ಮ ತೀರ್ಮಾನಗಳನ್ನು ಯಾಕೆ ತಡೆಹಿಡಿಯುತ್ತಾರೋ ತಿಳಿಯು ವುದಿಲ್ಲ; ಅವರ ಈ ದಾಕ್ಷಿಣ್ಯಪರತೆಗೂ ಅವರು ವಿಮರ್ಶಾ ಸಂಕಲನವೊಂದನ್ನು

ಇನ್ನೂ ಹೊರತರಲಾಗದಿರುವುದಕ್ಕೂ ಸಂಬಂಧವಿದೆ ಎಂದನಿಸುತ್ತದೆ. ಕೃತಿಯ ಮೌಲ್ಯನಿರ್ಣಯಕ್ಕೆ ಮೂಲತತ್ವಗಳಾಗಬೇಕಾದ ಸೂಕ್ಷ್ಮನೆಲೆಗಳನ್ನು ಮಂಡಿಸುವ ವಿಮರ್ಶಕ, ನಿಷ್ಠುರವಾಗಿ ಮೌಲ್ಯನಿಷ್ಕರ್ಷೆಯನ್ನೂ ಮಾಡದಿರುವುದು ಆತನ ಕರ್ತವ್ಯ ವಂಚನೆಯಾಗುತ್ತದೆ. ಅಕ್ಷರ ಮಾಧ್ಯಮದ ಮಹತ್ವವನ್ನು, ಸಾಮಾಜಿಕ ಪರಿವರ್ತನೆಯಲ್ಲಿ ಬುದ್ಧಿಜೀವಿಗಳ ಪಾತ್ರವನ್ನು ಸ್ವೀಕರಿಸುವುದಾದರೆ, ನಾರಾಯಣರ ಈ ನಿಲುವು ಅಷ್ಟೇನೂ ಸಮರ್ಪಕವೆನಿಸಲಾರದು).

ನಮ್ಮ ಸಾಹಿತ್ಯವನ್ನು ನಮ್ಮದೇ ಪರಿಕರಗಳೊಂದಿಗೆ ವಿಮರ್ಶಿಸುವ ಉಪಕ್ರಮ ಸಪ್ರೋದಯದ 'ರಸವಿಮರ್ಶೆ'ಯಾದೀತೆಂಬ ಭಯಕ್ಕೆ ಕಾರಣವಿಲ್ಲ. ಏಕೆಂದರೆ, ಹೊಸ ಹೊಸ ವಿಚಾರಗಳ ಹಿನ್ನೆಲೆಯಲ್ಲಿ ಕೃತಿಯನ್ನು ಹೆಚ್ಚು ವಾಸ್ತವವಾದಿ ನೆಲೆಯಲ್ಲಿ ಗ್ರಹಿಸಲು ಸಾಧ್ಯ. ರಸ ಅಲಂಕಾರ ಧ್ವನಿ ತತ್ವಗಳು ಕೂಡ ವಸ್ತು ವಿನ್ಯಾಸ ಮತ್ತು ಸಾಹಿತಿಯ ಚಿಂತನ ಕ್ರಮಕ್ಕೆ ಸಂಬದ್ಧವಾಗಿರುವ ಬಗೆಯನ್ನು ಶೋಧಿಸಲು ಸಾಧ್ಯವಾದಾಗ, ಇವು ಕೇವಲ ಬಾಹ್ಯ ಪರಿಕರಗಳೆನಿಸಲಾರವು : ಶೈಲಿಗೂ ಸಾಹಿತಿಯ ಲೋಕ ಗ್ರಹಿಕೆಗೂ ಒಳಸಂಬಂಧವಿರುವುದನ್ನು ಕಂಡಂಕೊಂಡಾಗ ಅಲಂಕಾರ ಪ್ರತಿಮೆ ದೃಷ್ಟಾಂತಗಳ ಅರ್ಥಪೂರ್ಣತೆ ಒಟ್ಟು ಕೃತಿಯ ಯಶಸ್ಸಿನ ಸಂದರ್ಭದಲ್ಲಿ ಎಷ್ಟು, ಏಕೆ ಎಂಬುದು ಖಚಿತವಾಗುತ್ತ ಬರುತ್ತದೆ. ಇದು, ಸಾಹಿತ್ಯ ಕೃತಿಯ ಒಂದು ಅಂಗವನ್ನೆ ಪರಿಪೂರ್ಣವೆಂದು ತಿಳಿಯದೆ, ವಿವಿಧ ಅಂಗಗಳನ್ನು ಪರಸ್ಪರ ಸಾಪೇಕ್ಷವಾಗಿ ಪರಿಗಣಿಸುವ ವಿಧಾನ (ಈ ಬಗೆಯ ಅಧ್ಯಯನದ ಮಾದರಿಯಾಗಿ ನೋಡಿ : ನನ್ನ 'ಕನಕನ ಲೋಕ ಗ್ರಹಿಕೆ ಮತ್ತು ಅಭಿವ್ಯಕ್ತಿ ಕ್ರಮ : ಅಂತಸ್ಸಂಬಂಧಗಳ ಅಧ್ಯಯನ'-ಅಚ್ಚಿನಲ್ಲಿ : 'ಸೃಜನವೇದಿ') ಈ ದೃಷ್ಟಿಯಿಂದ ನೋಡಿದರೆ ದೇವನೂರರಂಥ ದಲಿತ ಲೇಖಕರು ಶಿಷ್ಟ ಮತ್ತು ಗ್ರಾಮ್ಯ (ಅಶಿಕ್ಷಿತ) ಪಾತ್ರಗಳನ್ನು ಚಿತ್ರಿಸುವ ಮಾದರಿಯಲ್ಲಿನ ಅಂತರವನ್ನು, ಮತ್ತು ಭಾಷಾತ್ಮಕವಾಗಿ, ಐತಿಹಾಸಿಕವಾಗಿ ಈ ಪ್ರವೃತ್ತಿಯ ಅನಿವಾರ್ಯತೆಯನ್ನು ಗುರುತಿಸಬಹುದು ; ಅಷ್ಟೇ ಅಲ್ಲ, ಮಿತಿಯನ್ನೂ ನಿರ್ದೇಶಿಸಲೂ ಸಾಧ್ಯ. ಶೈಲಿ ಚಿಂತನಕ್ರಮ- ಕೃತಿಯ ಆಕೃತಿಯ ಒಳಸಂಬಂಧವನ್ನು ತಲಸ್ಪರ್ಶಿಯಾಗಿ ವಾಸ್ತವದ ನೆಲೆಯಲ್ಲಿ ಅಭ್ಯಸಿಸುವ ಪರಂಪರೆ ನಮ್ಮಲ್ಲಿನ್ನು ಆರಂಭವಾಗಬೇಕಿದೆ. ಪಂಪನ ಮಾರ್ಗ—ದೇಸಿಗಳ ಸಮನ್ವಯದಿಂದ ಹಿಡಿದು, ಸಂಸ್ಕೃತವನ್ನು ತಮ್ಮ ಕೈಯಲ್ಲಿ ವಿಭಿನ್ನ ಉದ್ದೇಶಗಳಿಗಾಗಿ ಬಳಸಿಕೊಳ್ಳುವ ಕುವೆಂಪು, ಗಂಗಾಧರ ಚಿತ್ತಾಲ, ಅಡಿಗ, ಚಂಪಾ, ಗೋಕಾಕ ; ಹಾಗೂ ಶಿಷ್ಟಗ್ರಾಮ್ಯಗಳ ಮೂಲಕ ವಿಭಿನ್ನ ವಾತಾವರಣ ಮೂಡಿಸುವ ದೇವನೂರು, ಶ್ರೀರಂಗ, ಚದುರಂಗ, ಮುಂತಾದವರ ಕುರಿತು ಪೂರ್ಣಪ್ರಮಾಣದ ಗ್ರಂಥಗಳಿನ್ನು ಬರಬೇಕಷ್ಟೆ. ಹಾಗೆ ನೋಡಿದರೆ, ಪಂಪನಿಂದ ಆರಂಭವಾದುದು ಎನ್ನಬಹುದಾದ, ಪೌರಾಣಿಕ ವ್ಯಕ್ತಿ

ಗಳನ್ನು ಲೌಕಿಕ ವ್ಯಕ್ತಿಗಳಿಗೆ ಸಮೀಕರಿಸಿ ಬರೆಯುವ ಪರಂಪರೆಯೇ ಸ್ವತಃ ದೇಸೀ ಸಂಸ್ಕೃತಿ—ಶೈಲಿಗಳ ಪರವಾಗಿ ನಿಲ್ಲುವ ಹಾಗಾಮದನ್ನು ಕಾಣುತ್ತೇವೆ. ತತ್ವಶಾಸ್ತ್ರಜ್ಞ ಥೂಬಿನ್ ಹೇಳುವಂತೆ, ವಂಶಾವಳಿಗಳ ಪ್ರಾಚುರ್ಯವೇ ಪ್ರಾಯಃ ದೈವಿಕತೆಯೊಂದಿಗಿನ ಸಾಹಚರ್ಯದ ವಿಷಯದಲ್ಲಿ ಆಸಕ್ತಿ ಇಳಿಮುಖವಾಗಲು ಒಂದು ಕಾರಣವಾಗಿದೆ (೧೯೮೪ in indian society : Historical probings, p. 108). ಈ ನಿಟ್ಟಿನಲ್ಲಿ ನೋಡಿದಾಗ, ಕನ್ನಡ ದೇಸೀ ಪರಂಪರೆಯು ಆರಂಭದಲ್ಲೆ ಮಾರ್ಗದ, ಸಂಸ್ಕೃತದ ಪೌರಾಣಿಕತೆಯ ವಿರುದ್ಧದ ಪ್ರತಿಭಟನೆಯ ಸೂಕ್ಷ್ಮವಿನ್ಯಾಸವನ್ನು ಗುರುತಿಸಬರುತ್ತದೆ.

ಇದೀಗ, ಆಕರಗ್ರಂಥಗಳ ಬಗ್ಗೆ ಒಂದೆರಡು ಮಾತು. ಆಕರಗ್ರಂಥಗಳ ಪೈಕಿ ಭಾಷಾ ವಿಜ್ಞಾನ, ವ್ಯಾಕರಣ, ಛಂದಶ್ಶಾಸ್ತ್ರ, ಕಾವ್ಯಮೀಮಾಂಸೆ, ವಿಮರ್ಶಾ ಪರಿಭಾಷಾಕೋಶಗಳ ಕ್ಷೇತ್ರದಲ್ಲಿ ೮೦ರ ದಶಕದಲ್ಲಿ ಉಲ್ಲೇಖಾರ್ಹ ಕೆಲಸವಾಗಿರುವುದು ನಿಜ. 'ಕಾವ್ಯಾರ್ಥಚಿಂತನ'(೧೯೮೫)ಕ್ಕೆ 'ಭಾರತೀಯ ಕಾವ್ಯಮೀಮಾಂಸೆ'ಯ ಈಚಿನ ಮೂರು ದಶಕಗಳ ವೈಚಾರಿಕ ಕ್ರಾಂತಿಯ ಫಲಾನುಭವದ ಹಿನ್ನೆಲೆಯಿದ್ದರೂ, ಅದು 'ಭಾರತೀಯ ಕಾವ್ಯಮೀಮಾಂಸೆ'ಯಷ್ಟು ಅನ್ವಯಿಕತೆಯಿಲ್ಲದೆ, ಉದ್ಧರಣೆ ಮತ್ತು ಪರಿಭಾಷಾತ್ಮಕ ನಿರೂಪಣೆಯಲ್ಲೆ ಕೃತಕೃತ್ಯವಾಗಲೆಳಸುತ್ತದೆ ; 'ಭಾರತೀಯ ಕಾವ್ಯ ಮೀಮಾಂಸೆ'ಯ ಸಮಗ್ರತೆಯ ಅನುಭವ ನೀಡದೆ ಬಿಡಿ ಬಿಡಿ ಲೇಖನಗಳ ಸಂಗ್ರಹವೆಂಬ ಭಾವನೆಯನ್ನು ಉಳಿಸಿಬಿಡುತ್ತವೆ. ಭಾಷಾವಿಜ್ಞಾನದಲ್ಲೂ ವಿದ್ವಾಂಸರ ಗಮನ ಸಾಮಾಜಿಕ ಮತ್ತು ಅನ್ವಯಿಕ ಭಾಷಾವಿಜ್ಞಾನದ ವಿವಿಧ ಕ್ಷೇತ್ರಗಳ ಬಗೆಗಾಗಲಿ ಶೈಲಿ ವಿಜ್ಞಾನದ ಬಗೆಗಾಗಲಿ ಅಷ್ಟಾಗಿ ಕೇಂದ್ರಿತವಾಗಿಲ್ಲ. ನಮ್ಮ ಸಂಸ್ಕೃತ-ತದ್ಭವಗಳು, ಏಕವಚನ–ಬಹುವಚನಗಳ ಕಲ್ಪನೆಯ ಹಿಂದೆ ಸಮಾಜ ವಿಕಾಸದ ಪ್ರತಿಚ್ಛಾಯೆ ಬಿದ್ದಿದೆ; ಸಮಾಜ ರಚನೆಯ ಒಂದು ವಿನ್ಯಾಸವೇ ವ್ಯಕ್ತವಾಗಿದೆ. ತದ್ಭವವಾಗಿ ಮಾಡಿಕೊಂಡು ಸ್ವೀಕರಿಸಲಾದ ಸಂಸ್ಕೃತ ಪದಗಳಿಗೆ ಕನ್ನಡದಲ್ಲಿ ಬೇರೆಯೇ ಅರ್ಥ ರೂಢವಾಗಿರುವುದನ್ನು ಗಮನಿಸಿದರೆ ಈ ತದ್ಭವ ಪ್ರಕ್ರಿಯೆ ಕೂಡ ನಮ್ಮ ಜನತೆಯ ಒಂದು ಸೃಜನಶೀಲ ಲಕ್ಷಣವೇ ಆಗಿವೆ ಎನ್ನಬಹುದು. ಭಾಷಾವಿಜ್ಞಾನ ಆಡು ಭಾಷೆಯನ್ನಾಧರಿಸಬೇಕಾಗಿರುವುದರಿಂದ, ಸಾಮಾಜಿಕ ಸ್ತರಗಳಲ್ಲಿ ಒಂದು ನಿರ್ದಿಷ್ಟ ಶಬ್ದ ಹೊಂದಿರುವ ಭಿನ್ನಾರ್ಥವನ್ನಾಗಲಿ, ಬಹುವಚನದ ಬಳಕೆಯ ಹಿಂದಿನ ಸಮಾಜ ಶಾಸ್ತ್ರೀಯತೆಯನ್ನಾಗಲಿ ಹಿನ್ನೆಲೆಯಾಗಿರಿಸಿಕೊಳ್ಳಬೇಕಾದ ಅಗತ್ಯ ಇವೊತ್ತು ಮನಗಾಣಲೇಬೇಕಾಗಿದೆ. ಶಬ್ದ ಭಂಡಾರಗಳಲ್ಲೂ ಗ್ರಾಂಥಿಕಕ್ಕಿಂತ ವಾಚಿಕ ರೂಪಕ್ಕೆ ಹೆಚ್ಚಿನ ಮಹತ್ವ ನೀಡುವುದರೊಂದಿಗೆ, ಭಾಷೆಯ ಮೂಲಸ್ವರೂಪವನ್ನು ಹಿಡಿದಿಟ್ಟುಕೊಂಡಿದೆ ಎನ್ನಲಾಗುವ ಸ್ಥಳನಾಮಗಳಿಗೆ ಕೂಡ ಕೋಶದಲ್ಲಿ ಉಲ್ಲೇಖ ಅಗತ್ಯ. ಕ.ಸಾ.ಪರಿಷತ್ತಿನ 'ಕನ್ನಡ ನಿಘಂಟು'ವಿನಲ್ಲಿ 'ನಾಮವಿಜ್ಞಾನ'ವೆಂಬ ನಮೂದೇ ಇಲ್ಲ

(ನೋಡಿ: ನಾಮ, ಪು. ೪೪೯-೨, ಸಂಪುಟ : ೫, ೧೯೮೭) ಎನ್ನುವಾಗ ನಮ್ಮ ವಿದ್ವಾಂಸರ ಸಮಕಾಲೀನತೆ, ಪ್ರವಾಹ ಭೂತತೆಯ ಕಲ್ಪನೆ ಯಾವ ಸ್ವರೂಪದ್ದೆಂದೇ ಆಶ್ಚರ್ಯಗೊಳ್ಳುವಂತಾಗುತ್ತದೆ. (ಈ ಸಂಪುಟ ಮುದ್ರಣವಾಗುವುದಕ್ಕೆ ದಶಕದಷ್ಟು ಹಿಂದೆಯೇ ನಾಮ ವಿಜ್ಞಾನದ ಕ್ರಮಬದ್ಧ ಅಧ್ಯಯನ ಕರ್ನಾಟಕದಲ್ಲಿ ಆರಂಭಗೊಂಡಿತ್ತು ಎಂಬುದನ್ನು ಗಮನಿಸಿ, ಈ ಪ್ರಮಾದದ ಗುರುತರ ಸ್ವರೂಪವನ್ನು ದಾಖಲುಪಡಿಸುತ್ತಿದ್ದೇನೆ)

*    *    *    *

'೮೦ರ ದಶಕದಲ್ಲಿ ಹಳಗನ್ನಡ ಕಾವ್ಯಗಳಿಗೆ ಸಂಬಂಧಿಸಿ ಸಾಹಿತ್ಯ ವಿಮರ್ಶೆ ಮತ್ತು ಸಂಶೋಧನೆಗಳು ವ್ಯಾಪಕವಾಗಿ ನಡೆದಿದ್ದಿಲ್ಲ. ಇದ್ದುದ್ದರಲ್ಲಿ ರನ್ನ ಮತ್ತು ರಾಘವಾಂಕನ ಕಾವ್ಯದ ಕುರಿತು ಜಿ. ಎಚ್. ನಾಯಕರ ಲೇಖನಗಳು, ಜನ್ನನ ಕುರಿತು ರಾಜಶೇಖರ್ ಲೇಖನ ವಿಶೇಷ ಉಲ್ಲೇಖ ಬೇಡುವಂಥವು. ರಾಮಾಯಣ, ಮಹಾಭಾರತದ ಸಂನಿವೇಶ ಮತ್ತು ಪಾತ್ರಕಲ್ಪನೆ ಬಗೆಗೆ ವಿಭಿನ್ನ ವೈಚಾರಿಕ ನೆಲೆಗಳ ಗ್ರಂಥಗಳು ಬಂದಿವೆ. ಮೂರ್ತಿರಾವ್, ಕಾಯ್ಕಿಣಿ, ಪೋಲಂಕಿ—ಈ ಮೂವರ ಗ್ರಂಥಗಳೂ ಮಾನವ ಶಾಸ್ತ್ರಜ್ಞೆ ಇರಾವತಿ ಕರ್ವೆ ಅವರ ಮಹಾಭಾರತ ಪರಿಸರ ಕುರಿತಾದ ಮಹಾನ್‌ಗ್ರಂಥ 'ಯುಗಾಂತ'ದ ಮಟ್ಟಕ್ಕೆ ಕೂಡಾ ಬರಲಾರದೆ ಹೋಗಿವೆ. ನಮ್ಮ ಪರಂಪರೆ ಬಗ್ಗೆ ನಾವು ಮಾತಾಡುವಾಗ ಪರಂಪರೆಯ ಸತ್ವಯುತ ಭಾಗಗಳು ಮತ್ತು ಘಟ್ಟಗಳು ಯಾವುವು ಎಂಬುದನ್ನು ಗ್ರಹಿಸಿದರೇನೇ ಯಾವುದನ್ನು ಹೇಗೆ ಮುಂದುವರಿಸಬೇಕು ಎಂಬ ಮುನ್ನೋಟ ಹೊಂದಲು ಸಾಧ್ಯ. ಅಷ್ಟರಿಂದ, ಇಂದಿನ ವಿಮರ್ಶಕ ಸಂಶೋಧಕನೂ ಆಗಿ, ಪರಂಪರೆಯೊಳಗಣ ಸೂಕ್ಷ್ಮವೂ ಸಂಕೀರ್ಣವೂ ಆದ ರಚನಾ ವಿನ್ಯಾಸವನ್ನು ಕಂಡುಕೊಳ್ಳಬೇಕಲ್ಲದೆ, ತಾನು ಕಂಡುಕೊಂಡದ್ದನ್ನು ನಿಷ್ಠುರವಾಗಿ, ವಸ್ತುನಿಷ್ಠವಾಗಿ, ಅಭಿವ್ಯಕ್ತಿಸುವಂಥ ಮುಕ್ತವಾತಾವರಣವನ್ನು ನಿರ್ಮಿಸುವತ್ತ ಕೂಡ ಶ್ರಮಿಸಬೇಕಾಗಿದೆ. ತಾನು ಕಂಡುಕೊಂಡ ಮತ್ತು ಹೇಳಲಿಚ್ಛಿಸುವ ಸತ್ಯಕ್ಕೆ ಆತ ತೆರಲೇಬೇಕಾದ ಬೆಲೆಯಿದು. ಮುಂದಿನ ದಿನಗಳಲ್ಲಿ ವಿಮರ್ಶಕ, ಸಂಶೋಧಕ ಜನತೆಯ ಗೆಳೆಯ, ಸಂಗಾತಿ, ಮಾರ್ಗದರ್ಶಕನಾಗಿ, ಸಮಷ್ಟಿಯ ಪರವಾಗಿ ಹೋರಾಟಗಾರನಾಗಿ ಕೂಡ ತನ್ನನ್ನು ತಾನು ರೂಪಿಸಿಕೊಳ್ಳಬೇಕಾದ ಆವಶ್ಯಕತೆಗೆ ನಾನು ಒತ್ತು ಹಾಕುತ್ತಿದ್ದೇನೆ. ಈ ಸಮಷ್ಟಿಪರ ಧೋರಣೆ ಮಾತ್ರ ವಿಮರ್ಶಕನಿಗೆ ಸತ್ಯವನ್ನು ಶೋಧಿಸಿ, ಎತ್ತಿಹಿಡಿಯಲು ಅಗತ್ಯವಾದ ನೈತಿಕತೆಯನ್ನು ಪೂರೈಸುತ್ತದೆ. ಇಂಥ ಶೋಧಕನ ಮನಸ್ಸಾಕ್ಷಿ ಸಮಷ್ಟಿಯ ಮನಸ್ಸಾಕ್ಷಿಯಲ್ಲಿ ಬೇರುಗೊಂಡಿರುತ್ತದೆ. ಹಾಗಾಗಿ, ಅದಷ್ಟೇ ಅಬಾಧಿತವಾಗಿ ಉಳಿಯಬಲ್ಲುದು. ಇಂಥ, ಬೇರುಳ್ಳ ವಿಮರ್ಶಕನಷ್ಟೇ ಪಂಪನೊಂದಿಗೆ 'ದಂಡಿನಲ್ಲಿ ಸೋದರಮಾವನೆ ?' ಎಂದು ಪ್ರಶ್ನಿಸಬಲ್ಲ.

(ಕೃಪೆ : ಕನ್ನಡ ಸಾಹಿತ್ಯ ಪರಿಷತ್ತು, ಬೆಂಗಳೂರು)

# ಇಸ್ಲಾಂ ಕುರಿತ ಎಂ. ಎನ್. ರಾಯ್ ಅವರ ವಿಚಾರಗಳು

—ಆರ್. ಲಕ್ಷ್ಮೀನಾರಾಯಣ

ಈ ಶತಮಾನದ ಭಾರತದ ಮಹಾ ವ್ಯಕ್ತಿಗಳಲ್ಲಿ ಎಂ. ಎನ್. ರಾಯ್ ಒಬ್ಬ ವಿಶಿಷ್ಟ ವ್ಯಕ್ತಿ. ಮಹಾನ್ ಕ್ರಾಂತಿಕಾರಿಯಾಗಿದ್ದಂತೆಯೇ ಮಹಾನ್ ಚಿಂತಕರೂ ಆಗಿದ್ದ ಈ ವ್ಯಕ್ತಿ ಒಬ್ಬ ಸಾಮಾಜಿಕ ತತ್ತ್ವಶಾಸ್ತ್ರಜ್ಞರೂ ಹೌದು. ಅವರೊಬ್ಬ ಧೀಮಂತ ದೈತ್ಯ. ಶ್ರೀ ವಿ. ಎಂ. ತಾರ್ಕುಂಡೆಯವರ ಮಾತಿನಲ್ಲಿ ಹೇಳಬೇಕೆಂದರೆ "ಗ್ರಂಥ ಭಂಡಾರಗಳನ್ನು ಅರಗಿಸಿಕೊಂಡು ಗ್ರಂಥ ಭಂಡಾರಗಳನ್ನು ನಿರ್ಮಿಸಿದ ಅದ್ಭುತ ಲೇಖಕ."

"ಇಸ್ಲಾಂನ ಐತಿಹಾಸಿಕ ಪಾತ್ರ" (Historical role of Islam) ಎಂಬ ತುಂಬ ಮಹತ್ವ ಪೂರ್ಣ ಗ್ರಂಥವನ್ನು ರಾಯ್ ಅವರು ಬರೆದಿದ್ದಾರೆ. ಪ್ರಸ್ತುತ ಲೇಖನದಲ್ಲಿ ಹೇಳಿರುವ ವಿಚಾರಗಳೆಲ್ಲವೂ ರಾಯ್ ಅವರ ಈ ಗ್ರಂಥದಲ್ಲಿ ನಿರೂಪಿತವಾಗಿರುವಂಥವು.

**ಉದ್ದೇಶ :**

ಈ ಗ್ರಂಥವನ್ನು ಬರೆಯುವುದರಲ್ಲಿ ರಾಯ್ ಅವರಿಗೆ ಇರುವ ಮುಖ್ಯ ಉದ್ದೇಶ, ಜಗತ್ತಿನ ಇತಿಹಾಸದಲ್ಲಿ ಇಸ್ಲಾಂ ನಿರ್ವಹಿಸಿದ ಮಹತ್ವ ಪೂರ್ಣ ಪಾತ್ರವನ್ನು ಕೂಲಂಕಷವಾಗಿ ವಿಶ್ಲೇಷಿಸಿ ತನ್ಮೂಲಕ ಭಾರತದ ಹಿಂದೂಗಳಿಗೆ ಇಸ್ಲಾಂ ಬಗ್ಗೆ ಇರುವ ಅಜ್ಞಾನ ಮಹಮ್ಮದೀಯರ ಬಗ್ಗೆ ಇರಬಹುದಾದ ಅಪನಂಬಿಕೆ. ಅಸಹನೆ, ಅವಜ್ಞೆ, ದ್ವೇಷ ತಿರಸ್ಕಾರದ ಭಾವನೆಗಳನ್ನು ಹೋಗಲಾಡಿಸುವುದರ ಜೊತೆ ಜೊತೆಗೇ ಭಾರತದ ಮುಸ್ಲಿಮರಿಗೆ ತಮ್ಮ ಧರ್ಮದ ಬಗ್ಗೆ ಇರುವ ಅಜ್ಞಾನವನ್ನು ಹೋಗಲಾಡಿಸುವುದೂ ಆಗಿದೆ. ಇದು ಅತ್ಯಂತ ಅಗತ್ಯವೆಂದು ಅವರು ಪ್ರತಿಪಾದಿಸುತ್ತಾರೆ. ಸಹಸ್ರಾರು ವರ್ಷಗಳಿಂದ ಜಗತ್ತಿನ ಯಾವುದೇ ಮುಸ್ಲಿಂ ರಾಷ್ಟ್ರಗಳಲ್ಲಿರುವುದಕ್ಕಿಂತ ಅಧಿಕ ಸಂಖ್ಯೆಯ ಮುಸ್ಲಿಮರು ಭಾರತದಲ್ಲಿ ತಮ್ಮ ನೆರೆಮನೆಯಲ್ಲೇ ವಾಸ ಮಾಡುತ್ತಿದ್ದರೂ ಜಗತ್ತಿನ ಯಾವುದೇ ನಾಗರಿಕ ಜನಾಂಗ ಮುಸ್ಲಿಮರ ಬಗ್ಗೆ ಹಿಂದೂಗಳಷ್ಟು ಅಜ್ಞಾನಿಗಳಾಗಲಿ. ಮಹಮ್ಮದೀಯ ಧರ್ಮದ ಬಗೆಗೆ ದ್ವೇಷ ಭಾವನೆಯುಳ್ಳವರಾಗಲಿ ಆಗಿಲ್ಲ. ಇಸ್ಲಾಂನ ಬಗೆಗಿನ ಅವರ ಈ ಭಾವನೆಗಳನ್ನು ತೀರಾ ಹಾಸ್ಯಾಸ್ಪದ ಎಂದು ತಳ್ಳಿ ಹಾಕಿಬಿಡುವುದು ಮತ್ತೂ ಹಾನಿಕಾರಕ. ರಾಯ್

ಅವರಿಗೆ ಮುಸ್ಲಿಮರ ಬಗೆಗಿನ ಹಿಂದೂಗಳ ಈ ಭಾವನೆಗಳನ್ನು ಭಾರತೀಯರ ಹಿತ ದೃಷ್ಟಿಯಿಂದಷ್ಟೇ ಅಲ್ಲದೆ ವೈಜ್ಞಾನಿಕ ಸತ್ಯ ಮತ್ತು ಐತಿಹಾಸಿಕ ಸತ್ಯದ ದೃಷ್ಟಿಯಿಂದಲೂ ವಿರೋಧಿಸಬೇಕೆಂದು ಕಂಡಿದೆ. ಭಾರತದ ಈಗಿನ ಸಂದರ್ಭವಲ್ಲಿ ಇಸ್ಲಾಂನ ಸಾಂಸ್ಕೃತಿಕ ಮಹತ್ವವನ್ನು ಸರಿಯಾಗಿ ಮನಗಾಣಬೇಕಾಗಿದೆ.

ಇದಕ್ಕೆ ಅವರು ಅನುಸರಿಸಿರುವ ಮಾರ್ಗ ತುಂಬ ವಿಶಿಷ್ಟವಾದದ್ದಾಗಿದೆ. ಐತಿಹಾಸಿಕ ಆಧಾರಗಳೊಂದಿಗೆ ವಿಷಯಗಳನ್ನು ನಿರೂಪಿಸಿ, ತಮ್ಮ ತೀರ್ಮಾನವನ್ನು ಹೇಳುವ ರೀತಿ ಎಂಥವರನ್ನಾದರೂ ಮಂತ್ರಮುಗ್ಧಗೊಳಿಸುತ್ತದೆ.

**ಇಸ್ಲಾಂ ಪ್ರಭಾವಕ್ಕೆ ಕಾರಣ :**

ಜಗತ್ತಿನ ಮಹಾನ್ ಚರಿತ್ರಕಾರ ಗಿಬ್ಬನ್ನನ ಪ್ರಕಾರ ಇಸ್ಲಾಂ ಹುಟ್ಟಿ ಇಷ್ಟು ವ್ಯಾಪಕವಾಗಿ ಜಗತ್ತಿನಾದ್ಯಂತ ಪ್ರಸಾರವಾಗಿ ಪ್ರಪಂಚದ ರಾಷ್ಟ್ರಗಳ ಮೇಲೆ ಶಾಶ್ವತವಾದ ನವೀನ ಪ್ರಭಾವವನ್ನು ಬೀರಿದ್ದು ಅತ್ಯಂತ ಅವಿಸ್ಮರಣೀಯ ಕ್ರಾಂತಿ. ಅರೇಬಿಯಾದ ಮರುಭೂಮಿಯಿಂದ ಬಂದ ಈ ಧರ್ಮ ಇಷ್ಟು ಅಲ್ಪ ಅವಧಿಯಲ್ಲಿ ಜಗತ್ತಿನಾದ್ಯಂತ ಹರಡಿ ಇಷ್ಟೊಂದು ವ್ಯಾಪಕವಾದ ಪ್ರಭಾವ ಬೀರಲು ಸಾಧ್ಯವಾದದ್ದಾದರೂ ಹೇಗೆ ? ಮೆಂತುವಾದ ಮತ್ತು ಸಹಿಷ್ಣುಗಳಾದ ಜನಾಂಗದ ಮೇಲೆ ಮತಾಂಧತೆಯ ವಿಜಯವೇ ಇಸ್ಲಾಂನ ವ್ಯಾಪಕತೆಗೆ ಕಾರಣ ಎಂಬ ವಾದವನ್ನು ಈಗಿನ ವಿದ್ಯಾವಂತ ಜಗತ್ತು ಎಂದೋ ತಿರಸ್ಕರಿಸಿದೆ. ಇಸ್ಲಾಂನ ಅದ್ಭುತ ಯಶಸ್ಸೆಂದರೆ ಮೂಲಭೂತವಾಗಿ ಅದರ ಕ್ರಾಂತಿಕಾರೀ ಮಹತ್ವ ಮತ್ತು ಚೈನಾ, ಭಾರತ, ಪರ್ಷಿಯಾ, ಗ್ರೀಸ್ ಮತ್ತು ರೋಮ್‌ಗಳ ಪ್ರಾಚೀನ ಧರ್ಮಗಳ ಅವನತಿಯಿಂದ ಉಂಟಾದ ನಿರಾಶಾಜನಕ ಸ್ಥಿತಿಯಿಂದ ಜನಸಮುದಾಯವನ್ನು ಪಾರುಮಾಡಿ ಮುನ್ನಡೆಸಲು ಅದು ಸಮರ್ಥವಾಯಿತೆನ್ನುವುದೇ ಆಗಿದೆ.

**ಇಸ್ಲಾಂ ಹಿನ್ನೆಲೆ, ಹುಟ್ಟು ಮತ್ತು ಬೆಳವಣಿಗೆ :**

ಪ್ರಾರಂಭದ ಅಧ್ಯಾಯಗಳಲ್ಲಿ ಇಸ್ಲಾಂ ಹಿನ್ನೆಲೆ, ಅದರ ಹುಟ್ಟು ಮತ್ತು ಬೆಳವಣಿಗೆಗಳನ್ನು ನಿರೂಪಿಸಿದ್ದಾರೆ. ಇಸ್ಲಾಂ ಹುಟ್ಟಿದ್ದು ಒಂದು ಧರ್ಮವಾಗಿ ಎನ್ನುವುದಕ್ಕಿಂತ ರಾಜಕೀಯ ಚಳುವಳಿಯಾಗಿ, ಇತರೆ ಎಲ್ಲಾ ಧರ್ಮಗಳಂತೆ ಇಸ್ಲಾಂ ಕೂಡ ಆ ಕಾಲದ, ದೇಶದ ವಾತಾವರಣ ಮತ್ತು ಪರಿಸ್ಥಿತಿಯ ಪರಿಣಾಮವಾಗಿ ಹುಟ್ಟಿದ್ದು. ಅದು ಸದಾ ಪರಸ್ಪರ ಅಂತಃಕಲಹಗಳಲ್ಲೇ ಮುಳುಗಿ ಛಿದ್ರ ಛಿದ್ರವಾಗಿದ್ದ ಅರೇಬಿಯಾದ ಅಲೆಮಾರಿ ಗುಂಗಿನವರಿಗೆಲ್ಲಾ ಒಂದುಗೂಡಲು ಕೊಟ್ಟ ಕರೆಯಾಗಿತ್ತು. ರೋಮನ್ ಇತಿಹಾಸಕಾರ ಪ್ಲಿನಿಯ ಪ್ರಕಾರ ಮಹಮದ್ ಬರುವುದಕ್ಕೆ ಆರುನೂರು ವರ್ಷಗಳ ಹಿಂದೆಯೇ ಅರಬ್ಬರ ಬಹುಮುಖ್ಯ ಆಸಕ್ತಿಯ ಕಸಬುಗಳೆಂದರೆ ಕೊಳ್ಳೆ ಮತ್ತು ವ್ಯಾಪಾರ. ಅವರು ಎಷ್ಟರ ಮಟ್ಟಿಗೆ ಯುದ್ಧ ಪಿಪಾಸು

ಗಳಾಗಿದ್ದರೆಂದರೆ ಮಹಮದ್ ಬರುವುದಕ್ಕೆ ಮುನ್ನ ಸಾವಿರದ ಏಳುನೂರು ಯುದ್ಧಗಳನ್ನು ಮಾಡಿದ್ದರು. ಆದರೆ ಇಷ್ಟೆಲ್ಲ ಯುದ್ಧ, ರಕ್ತಪಾತಗಳಿಂದ ಅವರ ಮುಖ್ಯ ಕಸಬಾದ ವ್ಯಾಪಾರಕ್ಕೂ ವ್ಯಾಘಾತ ಒದಗಿತೇ ವಿನಾ ಆರೇಬಿಯಾದ ಮರಳುಕಾಡನ್ನು ಸಮೃದ್ಧಗೊಳಿಸಲಾಗಲಿಲ್ಲ. ಆರ್ಥಿಕ ಅಗತ್ಯವೇ ಯುದ್ಧಗಳಿಗೆ, ಪರಸ್ಪರರ ನಡುವಿನ ಅಂತಃಕಲಹಗಳಿಗೆ ಕೊನೆಯ ವಿರಾಮ ಹಾಕುವಂತೆ ಅವರನ್ನು ಒತ್ತಾಯಿಸಿತು. ಹೊಸ ಧರ್ಮದ ಹೆಸರಿನಲ್ಲಿ ಅತ್ಯಂತ ಪ್ರತಿಷ್ಠಿತ ಮನೆತನವಾದ ಹಾಶೀಮ್ ಮನೆತನದ ಮಹಮದ್ ಅರಬ್ ಪಂಗಡಗಳ ನಡುವೆ ಐಕ್ಯತೆಗೆ ಕರೆಕೊಟ್ಟ.

ಇದರ ಜೊತೆಗೆ ಅದೇ ಸಮಯಕ್ಕೆ ಕ್ರೈಸ್ತ ಧರ್ಮ ತನ್ನ ಮೊದಲಿನ ಕ್ರಾಂತಿಕಾರಿ ಸತ್ವ ನೀಗಿಕೊಂಡು, ಪವಾಡಗಳ ಮೊರೆಹೊಕ್ಕು ಮೂಢನಂಬಿಕೆಗಳ ಕಂತೆಯಾಗಿ ಕ್ರೈಸ್ತ ಸಂತರ ಮೂರ್ತಿಪೂಜೆಯ ಮಟ್ಟಕ್ಕಿಳಿದಿತ್ತು. ಹಾಗೆಯೇ ಪಾರ್ಸಿಗಳ ಜರತುಷ್ಟ್ರ ಮತವೂ ಆಗಿತ್ತು. ಇಂಥ ಪರಿಸ್ಥಿತಿಯಿಂದ ಜನರನ್ನು ಪಾರುಮಾಡುವ ಭರವಸೆಯ, ಬಿಡುಗಡೆಯ ಧರ್ಮವಾಗಿ ಇಸ್ಲಾಂ ಬಂತು. ಇಸ್ಲಾಮಿಕ್ ಕ್ರಾಂತಿ ಮಾನವತೆಯನ್ನು ಈ ಸಂಪ್ರದಾಯದ ಕಪಿಮುಷ್ಟಿಯಿಂದ ಪಾರು ಮಾಡಿತು. ಉಳಿದೆಲ್ಲ ದೇವತೆಗಳನ್ನು ಅಲ್ಲಗಳೆದು ಒಬ್ಬನೇ ದೇವರೆಂದು ಅದು ಸಾರಿತು. ಮಹಮ್ಮದನ ಈ ತೀವ್ರ ಏಕೇಶ್ವರವಾದ ಅಂತಃಕಲಹಗಳಿಂದ ಛಿದ್ರ ವಿಚ್ಛಿದ್ರವಾಗಿದ್ದ ಪಂಗಡಗಳ ನಡುವೆ ಐಕ್ಯತೆಯನ್ನು ಸುಗಮ ಗೊಳಿಸಿತು. ಕ್ಯಾಥೊಲಿಕ್ ಸಂಪ್ರದಾಯದ ಅಸಹಿಷ್ಣುತೆಯಿಂದಾಗಿ ಕಿರುಕುಳಕ್ಕೊಳಗಾಗಿದ್ದ ದೇಶದ ಜನತೆಯೂ ಇದಕ್ಕೆ ಓಗೊಟ್ಟಿತು. ಇಸ್ಲಾಂ, ಮತೀಯ ಹಿಂಸೆಯ ವಿರುದ್ಧ ರಕ್ಷಣೆಯಾಗಿ ಮತ್ತು ದಮನಕ್ಕೊಳಗಾದ ಜನತೆಯ ಆಶ್ರಯವಾಗಿ ಬೆಳೆಯಿತು. ಎಲ್ಲರೊಂದಿಗೆ ಹೊಂದಿಕೊಳ್ಳುವ ಉದಾರ ಬುದ್ಧಿಯ ಪ್ರಜಾಪ್ರಭುತ್ವವಾದಿ ನೀತಿ ಮತ್ತು ಏಕೇಶ್ವರವಾದದ ನೀತಿಗಳನ್ನೊಳಗೊಂಡ ಇಸ್ಲಾಂನ ಈ ಗುಣಗಳು ಅದರ ತಾಯ್ನಾಡಿನ ಭೌಗೋಳಿಕ ಮತ್ತು ಐತಿಹಾಸಿಕ ಪರಿಸ್ಥಿತಿಯ ಫಲ.

**ಇಸ್ಲಾಂ ಮತಾಂಧರ ಧರ್ಮವೆ ? :**

ಇಸ್ಲಾಂನ ಮೇಲಿರುವ ಒಂದು ಪ್ರಮುಖ ಆಪಾದನೆ ಮತ್ತು ಅಪಖ್ಯಾತಿ–ಅದು ಕತ್ತಿಯ ಬಲದಿಂದ ತನ್ನ ಧರ್ಮವನ್ನು ಬಲವಂತವಾಗಿ ಹೇರಿತು ಮತ್ತು ಅದು ಮತಾಂಧರ ಧರ್ಮ ಎಂಬುದು. ಆದರೆ ಇದು ವಾಸ್ತವಿಕವಲ್ಲ ಎಂದು ರಾಯ್ ಪ್ರತಿಪಾದಿಸುತ್ತಾರೆ. ಇಸ್ಲಾಂನ ಮೊದಲ ಧರ್ಮಗುರು ಅಬುಬಕರ್‌ಗಿಂತ ಹೆಚ್ಚು ಪ್ರಾಮಾಣಿಕ ಹೆಚ್ಚು ವಿನಯವಂತರು ಚರಿತ್ರೆಯಲ್ಲಿ ಕಂಡು ಬರುವುದಿಲ್ಲ ಎಂದು ರಾಯ್ ಹೇಳುತ್ತಾರೆ. ಕಾರಣ ಮತ ಪ್ರಚಾರಕ್ಕೆ ಹೊರಟ "ದೇವ ಸೈನ್ಯ"ಕ್ಕೆ ಅವನ ಆಜ್ಞೆ ಹೀಗಿತ್ತು–"ನ್ಯಾಯದಿಂದ ನಡೆಯಿರಿ, ಅನ್ಯಾಯ ಯಾವತ್ತೂ ಊರ್ಜಿತ

ವಾಗುವುದಿಲ್ಲ. ಧೈರ್ಯಶಾಲಿಗಳಾಗಿರಿ. ಇನ್ನೊಬ್ಬರಿಗೆ ವಶವಾಗುವ ಬದಲು ಸ್ತ್ರೀಯರನ್ನು, ಮಕ್ಕಳನ್ನು ಕೊಲ್ಲದಿರಿ. ಹಣ್ಣಿನ ಮರಗಳನ್ನು, ದವಸ ಧಾನ್ಯಗಳನ್ನು ನಾಶ ಮಾಡಬೇಡಿ ಶತ್ರುಗಳ ವಿಷಯದಲ್ಲೂ ಮಾತಿಗೆ ತಪ್ಪದಿರಿ. ಪಾರಲೌಕಿಕ ವ್ಯಕ್ತಿಗಳನ್ನು ಸಾಯಿಸಬೇಡಿ." ಈ ಉಪದೇಶವನ್ನವರು ಕಟ್ಟುನಿಟ್ಟಾಗಿ ಪಾಲಿಸಿದರು.

ಈ ಅರಬ್ ಆಕ್ರಮಣಕಾರರನ್ನು ಎಲ್ಲೆಡೆಯಲ್ಲೂ ತೆರೆದ ತೋಳುಗಳಿಂದ ಸ್ವಾಗತಿಸಲಾಯಿತು. ಬೈಜಾಂಟಿಯನ್‌ನ ಭ್ರಷ್ಟಾಚಾರದಿಂದ ತತ್ತರಿಸಿದ, ಪರ್ಷಿಯನ್ನರ ದಬ್ಬಾಳಿಕೆ, ಕ್ರಿಶ್ಚಿಯನ್ನರ ಮೌಢ್ಯದಿಂದ ಕಂಗೆಟ್ಟಿದ್ದ ಜನ ಹೃತ್ಪೂರ್ವಕವಾಗಿ ಸ್ವಾಗತಿಸಿದರು. ತಾವು ಗೆದ್ದ ಜನರ ಸಹಾನುಭೂತಿ ಮತ್ತು ಬೆಂಬಲವನ್ನು ಇವರು ಗಳಿಸಿದರು. ಈ ಸಂದರ್ಭದಲ್ಲಿ ರಾಯ್ ಅವರು ಹೇಳುವ ಒಂದು ಮಾತು ಬಹಳ ಮುಖ್ಯವೆನಿಸುತ್ತದೆ. ಅನ್ನುವರೆ "ಆಕ್ರಮಣಕ್ಕೊಳಗಾದ ಜನರ ಕ್ರಿಯಾಶೀಲ ಬೆಂಬಲ ಅಥವಾ ಸಹಿಷ್ಣುತೆ ಇಲ್ಲದಿದ್ದರೆ, ಯಾವನೇ ಆಕ್ರಮಣಕಾರಿ ಗೆದ್ದ ಜನತೆಯ ಮೇಲೆ ಪೂರ್ಣ ಪ್ರಭುತ್ವವನ್ನು ಸ್ಥಾಪಿಸಲಾರ." ಮುಂದೆ ಭಾರತದ ಸಂದರ್ಭಕ್ಕೂ ಈ ಮಾತು ಬಹುಮಟ್ಟಿಗೆ ಅನ್ವಯವಾಗುತ್ತದೆ.

ಈ ಜನಾಂಗದ ಸೈನಿಕ ಕಾರ್ಯಾಚರಣೆ ಪ್ರವಾದಿ ಮಹಮದ್ ಹುಟ್ಟಿದ ನೂರು ವರ್ಷಗಳಲ್ಲಿ ಭಾಗ್ದಾದ್‌ನಲ್ಲಿ "ಶಾಂತಿನಗರ"ವನ್ನು ಸ್ಥಾಪಿಸುವುದರೊಂದಿಗೆ ಕೊನೆಗೊಂಡಿತು. ಮುಂದಿನ ಕಾಲಾಂತರದಲ್ಲಿ ಈ ಜನಾಂಗದ ಆಸಕ್ತಿ ಯುದ್ಧ ರಂಗದಿಂದ ಸರಿದು ವ್ಯಾಪಾರ, ಕೈಗಾರಿಕೆ, ವಿಜ್ಞಾನ ಸಾಹಿತ್ಯ ಇತ್ಯಾದಿಗಳ ಕಡೆಗೆ ತೊಡಗಿತು. ಸುಮಾರು ಮುನ್ನೂರು ವರ್ಷಗಳನ್ನು ಅರಬ್ ಜನಾಂಗ ಶಾಂತಿ, ಸೌಹಾರ್ದಕ ಸಮೃದ್ಧಿ ಪ್ರಗತಿಗಳಲ್ಲಿ ಕಳೆಯಿತು. ರಾಯ್ ಅವರು ಇಸ್ಲಾಂನ ಈ ಮುಖವನ್ನು ವಿಸ್ತಾರವಾಗಿ ಚರ್ಚಿಸಿ ವಿಜ್ಞಾನ, ಸಾಹಿತ್ಯ, ಕೈಗಾರಿಕಾ ರಂಗಗಳಲ್ಲಿ ಅರಬ್ಬರ ಸಾಧನೆಯತ್ತ ನಾವು ಆಶ್ಚರ್ಯ ಚಕಿತರಾಗುವಂತೆ ಮಾಡಿದ್ದಾರೆ.

ಹಾಗಾದರೆ ಕ್ರೌರ್ಯ ಮುಸ್ಲಿಂ ಜನಾಂಗದಲ್ಲಿ ಸೇರಿಕೊಂಡದ್ದು ಯಾವಾಗ ? ಮಧ್ಯ ಏಷಿಯಾದಿಂದ ಬಂದ ಅನಾಗರಿಕ ಮಂಗೋಲರ ಸೇರ್ಪಡೆಯಿಂದಾದ ಅಧಿಕ ಶಕ್ತಿಯಿಂದಾಗಿ, ದರೋಡೆ, ಕೊಳ್ಳೆ ಸುಲಿಗೆ, ಹಿಂಸಾಚಾರ, ದಮನಗಳು ಮುಸ್ಲಿಂ ಆಕ್ರಮಣದ ಜೊತೆಗೂಡಿದುವು. ಅರಬ್ಬರ ವಿದ್ಯೆ ಸಂಸ್ಕೃತಿಗಳು ಅರಮನೆಯ ಕೀಳು ಭೋಗ ವಿಲಾಸಗಳಿಂದ ಹಾಳಾದುವು. ತುರ್ಕೀಯರ ಮತ್ತು ಟಾರ್ಟಾರರ ಅತ್ಯಾಚಾರಿ ಹಸ್ತಗಳಿಗೆ ಸಿಕ್ಕಿ ಕಲುಷಿತಗೊಂಡುವು.

ರಾಯ್ ಅವರ ಖಚಿತ ಅಭಿಪ್ರಾಯವೆಂದರೆ ಇಸ್ಲಾಂ ಅನ್ನು ಮಿಲಿಟರಿಯೊಂದಿಗೆ ತಗಲು ಹಾಕುವುದರಿಂದ ಅದನ್ನು ತಪ್ಪಾಗಿ ಗ್ರಹಿಸಿದಂತಾಗುತ್ತದೆ. ಮಹಮದ್ ಅರಬ್ ಯೋಧರ ಪ್ರವಾದಿಯಾಗಿರಲಿಲ್ಲ ; ಅರಬ್ ವ್ಯಾಪಾರಿಗಳ

ಪ್ರವಾದಿಯಾಗಿದ್ದ. ಅರಬ್ ವಿದ್ವಾಂಸರು ಮತ್ತು ತತ್ತ್ವಶಾಸ್ತ್ರಿಗಳು ವ್ಯಾಪಾರಿ ಕುಟುಂಬಗಳಿಂದ ಬಂದವರಾಗಿದ್ದರು. ತತ್ತ್ವಶಾಸ್ತ್ರ ಹುಟ್ಟುವುದು ವ್ಯಾಪಾರ ವಹಿವಾಟುಗಳಲ್ಲಿ ತೊಡಗಿರುವ ಶ್ರೀಮಂತ ಜನಸಮುದಾಯದಲ್ಲಿಯೇ. ಇಸ್ಲಾಂ ಹೊಸ ಸಾಮಾಜಿಕ ಸಂಬಂಧದ ಚಿಂತನರೂಪವಾಗಿ ಜನ್ಮತಾಳಿ, ಮಾನವ ಮನಸ್ಸನ್ನೇ ಪಲ್ಲಟಗೊಳಿಸಿತು. ಪ್ರಾಯೋಗಿಕ ವಿಜ್ಞಾನ ಮತ್ತು ವೈಚಾರಿಕ ತತ್ತ್ವಶಾಸ್ತ್ರಗಳಿಗೆ ಅನುಪಮ ಕಾಣಿಕೆ ನೀಡಿತು.

ರಾಯ್ ಅವರ ಈ ಕೃತಿಯಲ್ಲಿ ಬಹಳ ಮುಖ್ಯವಾದ ಭಾಗಗಳೆಂದರೆ, ಜ್ಞಾನ ವಿಜ್ಞಾನ, ತತ್ತ್ವಶಾಸ್ತ್ರ ಕ್ಷೇತ್ರಗಳಲ್ಲಿ ಮಹಮ್ಮದೀಯರ ಸಾಧನೆಗಳನ್ನು ವಿಶದಪಡಿಸಿ ವೈಚಾರಿಕ ಕ್ಷೇತ್ರಕ್ಕೆ ಇಸ್ಲಾಮಿನ ಕೊಡುಗೆ ಏನು ಎಂಬುದನ್ನು ಮನದಟ್ಟು ಮಾಡಿ ಕೊಟ್ಟಿರುವ ಅಧ್ಯಾಯ ಹಾಗೂ ಇಸ್ಲಾಂ ಭಾರತಕ್ಕೆ ಪ್ರವೇಶಿಸಿ ಇಲ್ಲಿಯೂ ತನ್ನ ಆಧಿಪತ್ಯವನ್ನು ಹೇಗೆ ಸ್ಥಾಪಿಸಿತೆಂಬುದನ್ನು ಹೇಳಿರುವ ಅಧ್ಯಾಯ.

**ವೈಚಾರಿಕ ಕ್ಷೇತ್ರಕ್ಕೆ ಅರಬ್ಬರ ಕೊಡುಗೆ :**

ಅರಬ್ಬರ ವಿದ್ಯಾ ಸಾಧನೆ ಸುಮಾರು ನೂರು ವರ್ಷಗಳವರೆಗೆ ನಡೆಯಿತು. ಆಗ ಯೂರೋಪ್ ಅಂಧಕಾರದಲ್ಲಿ ಮುಳುಗಿತ್ತು. ಬ್ರಾಹ್ಮಣರ ಪ್ರತಿಗಾಮಿತನದ ಮೇಲ್ಗೈಯಾಗಿ ಭಾರತ ನೆಲಕಚ್ಚಿತ್ತು. ಅರಬ್ಬರ ಆಳ್ವಿಕೆಯ ಕಾಲದಲ್ಲಿ ಏಷಿಯಾ, ಉತ್ತರ ಆಫ್ರಿಕಾ ಮತ್ತು ಸ್ಪೈಯಿನ್‌ಗಳಲ್ಲಿ ವಿದ್ಯೆ ಸಂಸ್ಕೃತಿಗಳು ವರ್ಧಿಸಿದುವು. ಗ್ರೀಕರ ಅಮೂಲ್ಯ ತತ್ತ್ವಜ್ಞಾನ ಮತ್ತು ವಿದ್ಯೆ ಕ್ರೈಸ್ತ ಚರ್ಚಿನ ಅಸಹನೆ ಮತ್ತು ಮೌಢ್ಯಗಳಲ್ಲಿ ಹೂತು ಹೋಗಿತ್ತು. ಅರಬ್ಬರಿಲ್ಲದಿದ್ದರೆ ಅದು ಶಾಶ್ವತವಾಗಿ ಹಾಳಾಗಿಹೋಗುವ ಅಪಾಯ ಕಾದಿತ್ತು. ಅರಬ್ ತತ್ತ್ವಜ್ಞಾನಿಗಳು ಮತ್ತು ವಿಜ್ಞಾನಿಗಳಿಂದಾಗಿ ಗ್ರೀಕರ ಶ್ರೀಮಂತ ವಿದ್ಯೆಯ ಭಂಡಾರ ಆಧುನಿಕ ಯುಗದ ವಿಚಾರ ವೇತ್ತರನ್ನು ತಲುಪಲು ಸಾಧ್ಯವಾಯಿತು. ಆಧುನಿಕ ವಿಜ್ಞಾನದ ಪಿತಾಮಹ, ನೆನಿಸಿದ ಸರ್ ರೋಜರ್ ಬೇಕನ್ ಅರಬ್ಬರ ಶಿಷ್ಯತ್ವ ವಹಿಸಿದ್ದ. ಹಂಬೋಲ್ಟ್ ಪ್ರಕಾರ, ಈಗ ನಾವು ಭೌತ ವಿಜ್ಞಾನಗಳು ಎಂದು ಯಾವುದನ್ನು ಕರೆಯುತ್ತೇವೋ ಅದರ ಮೂಲ ಪಿತೃಗಳು ಅರಬ್ಬರೇ. 12ನೇ ಶತಮಾನದ ಪೂರ್ವಾರ್ಧದಲ್ಲಿದ್ದ ಅವೆರೋಸ್, ಅರಿಸ್ಟಾಟಲ್‌ಗೆ ಸಮನಾದ ಬುದ್ಧಿಶಾಲಿಯಾಗಿದ್ದ. ಗ್ರೀಕರಿಗೆ ನೆಲೆ ತಪ್ಪಿ ರೋಮನ್ ಸಾಮ್ರಾಜ್ಯದಿಂದ ಒಂದಾಗ, ಅವರಿಗೆ ಆಶ್ರಯ ನೀಡಿದ್ದು ಬಾಗ್ದಾದಿನ ಖಲೀಫರೇ. ಕೇವಲ ಆಶ್ರಯ ಕೊಟ್ಟದಷ್ಟೇ ಅಲ್ಲದೆ, ಗ್ರೀಕ ಪ್ರಾಚೀನ ಜ್ಞಾನಿಗಳ ಎಲ್ಲ ಲಭ್ಯ ಗ್ರಂಥಗಳನ್ನೂ ರೋಮನ್ ಸಾಮ್ರಾಜ್ಯದ ಎಲ್ಲ ಕಡೆಗೆ ಕಳಿಸಿಕೊಟ್ಟರು. ಅರಿಸ್ಟಾಟಲ್, ಹಿಪ್ಪೋಕ್ರೇಟಿಸ್, ಟಾಲೆಮಿ, ಯೂಕ್ಲಿಡ್ ಮುಂತಾದವರ ಪ್ರಮುಖ ಕೃತಿಗಳ ಅನುವಾದ ಅರೇಬಿಯನ್ ಭಾಷೆಗಾಯಿತು. ಸಾವಿರಾರು ಜನರಿಗೆ ವಿಜ್ಞಾನ ವಿದ್ಯೆ ಕಲಿಸಲು ಶಾಲೆಗಳನ್ನು ಸ್ಥಾಪಿಸಲಾಯಿತು.

"ಜ್ಞಾನದ ಆಚಾರ್ಯರೇ ಜಗತ್ತಿನ ನಿಜವಾದ ಶಾಸನಕರ್ತರು: ಅವರ ಸಹಾಯ ವಿಲ್ಲದಿದ್ದರೆ ಜಗತ್ತೆಲ್ಲ ಅಜ್ಞಾನ ಮತ್ತು ಅನಾಗರಿಕತೆಗಳಲ್ಲಿ ಮುಳುಗುತ್ತದೆಂದು" ಅರಬ್ಬರ ಖಲೀಫ್ ಅಲ್‌ಮನನ್ ಹೇಳುತ್ತಾನೆಂದು ಚರಿತ್ರಕಾರ ಅಬುಲ್ ಫರಾಗಿ ಯಸ್ ವರದಿ ಮಾಡುತ್ತಾನೆ. ಆಧುನಿಕ ಯೂರೋಪು ಗಣಿತ, ವೈದ್ಯ, ಖಗೋಲ ವಿಜ್ಞಾನ ಇವೆಲ್ಲವನ್ನೂ ಕಲಿತದ್ದು ಅರಬ್ಬರಿಂದಲೇ. ಆಕಾಶ ಕಾಯಗಳಸ್ಥಾನ ಕುರಿತ ಟಾಲೆಮಿಯ ವಿಚಾರಗಳನ್ನು ಅಲ್ಲಗಳೆದ ಮೊದಲ ಖಗೋಲ ಶಾಸ್ತ್ರಜ್ಞ ಅಬುಬುಕರ್. ಬ್ರೂನೋ, ಗೆಲಿಲಿಯೋ, ಕೂಪರ್ನಿಕಸ್ ಇವರ ಆವಿಷ್ಕಾರಗಳಿಗೆ ಅಬುಬಕರ್ ವಿಚಾರಗಳೇ ತೋರುಗಂಬ. ಈ ಮುಸ್ಲಿಂ ತತ್ತ್ವಜ್ಞಾನಿಯ ವಿಚಾರಗಳು ಬೈಬಲ್ ನಲ್ಲಿ ಹೇಳಿರುವ ವಿಶ್ವ ಕಲ್ಪನೆಯನ್ನು ತಲೆಕೆಳಗು ಮಾಡಿ ಕ್ರೈಸ್ತ ಗುರು ಪೀಠಗಳನ್ನು ಅಲ್ಲಾಡಿಸಿದುವು. ನಾಸ್ತಿಕತೆಗೆ ಇನ್ನೊಂದು ಹೆಸರು ಅವೆರೋಸ್. ಅವನ ಪ್ರಕಾರ ತತ್ತ್ವಶಾಸ್ತ್ರಜ್ಞನ ವಿಶಿಷ್ಟ ಧರ್ಮವೆಂದರೆ, ದೇವರ ಸೃಷ್ಟಿಯನ್ನು ಅರಿತುಕೊಂಡು, ತನ್ಮೂಲಕ ದೇವರ ಬಗ್ಗೆ ಜ್ಞಾನ ಮತ್ತು ಸತ್ಯವನ್ನು ತಿಳಿದುಕೊಳ್ಳುವುದೇ ಆಗಿದೆ. ಹಾಗೂ ಅದೇ ಅವನಿಗೆ ನಾವು ಸಲ್ಲಿಸಬಹುದಾದ ಅತ್ಯುನ್ನತ ಪೂಜೆ. ವಿವೇಚನೆಯೇ ಸತ್ಯದ ಏಕೈಕ ಮೂಲವೆಂದು ಸಾರಿದ ಅತ್ಯುನ್ನತ ಚಿಂತಕ. ಸೃಷ್ಟಿಕರ್ತನೊಬ್ಬ ನಿದ್ದಾನೆಂಬ ಪೂರ್ವ-ಕಲ್ಪಿತ ಅಭಿಪ್ರಾಯವನ್ನು ಬದಿಗಿಟ್ಟು, ದೇವರ ಬಹಿಃಸೃಷ್ಟಿ ಯಾದ ಪ್ರಕೃತಿಯನ್ನು ಅರಿಯುವ ಮೂಲಕ ಅದನ್ನರಿಯುವ ಪ್ರಯತ್ನಕ್ಕೆ ತೊಡಗಿದರೆ, ದೈವೀವ್ಯಕ್ತಿತ್ವ ಅಥವಾ ದೇವರು ಎಂಬುದು ಹಿಂದೆ ಸರಿದು ಕೊನೆಗೆ ಅದು ಇಲ್ಲವೇ ಆಗುತ್ತದೆ. ಇಂಥ ನಾಸ್ತಿಕ ವಿಚಾರಗಳನ್ನು ಹೇಳಿದ ಧರ್ಮದ ಮೂಲ. ಅಸಹಿಷ್ಣುತೆ ಮತ್ತು ಮತಾಂಧತೆ ಆಗಿರಲು ಸಾಧ್ಯವಿಲ್ಲ. ಇಡೀ ಮಧ್ಯ ಯುಗ ಪೂರ್ತಿ ಯುರೋಪನ್ನು ತನ್ನ ಕಪಿಮುಷ್ಟಿಯಲ್ಲಿ ಹಿಡಿದಿಟ್ಟಿದ್ದ ಕ್ಯಾಥೋಲಿಕ್ ಗುರುಪೀಠದ ಆಧಾರ ಸ್ತಂಭಗಳನ್ನು ಅಲುಗಾಡಿಸಿದ್ದು ಇದೇ ನಾಸ್ತಿಕ ವಿಚಾರಗಳು. ಮುಕ್ತಚಿಂತನೆಗೆ ರಾಜಮಾರ್ಗವನ್ನು ತೆರೆದ ಕೀರ್ತಿ ಅರಬ್ ತತ್ತ್ವ ಶಾಸ್ತ್ರಜ್ಞರು ಮತ್ತು ವೈಚಾರಿಕರಿಗೆ ಸಲ್ಲುತ್ತದೆ. ಆಧುನಿಕ ಕಾಲದ ಧರ್ಮಗಳಲ್ಲಿ ಶ್ರೇಷ್ಠ ಧರ್ಮ ವಾದ ಇಸ್ಲಾಂ ಎಲ್ಲ ಧರ್ಮಗಳ ತಳಹದಿಯನ್ನೇ ನಾಶಮಾಡಿತು. ಅಥೆನ್ಸ್ ಮತ್ತು ಅಲೆಗ್ಸಾಂಡ್ರಿಯಾದ ಮಹಾಜ್ಞಾನಿಗಳ ಅಮೂಲ್ಯ ಆಧ್ಯಾತ್ಮಿಕ ಮತ್ತು ವೈಜ್ಞಾನಿಕ ಜ್ಞಾನದ ಜೊತೆಗೆ ಅರಬ್ಬರು ಆಧುನಿಕ ನಾಗರಿಕತೆಯ ಪ್ರತಿಷ್ಠಾಪನೆಗೆ ತಮ್ಮದೇ ಆದ ಮೌಲಿಕ ಕಾಣಿಕೆ ಕೊಟ್ಟರು. ಅದೆಂದರೆ ಸಂದೇಹವಾದ (Scepticism)—ಎಲ್ಲ ನಂಬಿಕೆಗಳನ್ನೂ ತನ್ನಲ್ಲಿ ಕರಗಿಸಿಕೊಳ್ಳುವ ಸಾಮರ್ಥ್ಯವುಳ್ಳ ರಾಜದ್ರವ. ಆದರೆ ಇಂಥ ಮುಕ್ತ ವಿಚಾರಗಳು ಧಾರ್ಮಿಕ ಮುಖಂಡರ ಲೌಕಿಕ ಆಸಕ್ತಿಗಳೊಂದಿಗೆ ಘರ್ಷಣೆಗೆ ಇಳಿಯಬೇಕಾಯಿತು, ಕೋರ್ಡೋವಾನ ಆಸ್ಥಾನದಿಂದ ಅವೆರೋಸ್

ಹೊರದೂಡಲ್ಪಟ್ಟ. ಅರಿಸ್ಟಾಟಲ್ ಮತ್ತು ಅವೆರೋಸ್ ಹೆಸರುಗಳು ಬಹಿಷ್ಕಾರಕ್ಕೊಳಗಾದುವು. ಇಂಥ ನಾಸ್ತಿಕ ವಿಚಾರಗಳನ್ನು ಸುಟ್ಟು ಬೂದಿ ಮಾಡಬೇಕೆಂಬ ರಾಜಾಜ್ಞೆ ಹೊರಟಿತು. ಮಾನವ ಪ್ರಗತಿಯ ಅತ್ಯುನ್ನತ ಶಿಖರದಿಂದ ಇಸ್ಲಾಂ ಅಧಃ ಪತನ ಹೊಂದಿದ್ದನ್ನು ಅದು ಸೂಚಿಸುತ್ತದೆ. ಈಗ ಅದು ಪ್ರತಿಗಾಮಿ, ಅಸಹಿಷ್ಣು ಅಜ್ಞಾನ, ಪೂರ್ವಗ್ರಹಗಳ ಆಕರವಾಯಿತು. ಕಾಲಾಂತರದಲ್ಲಿ ಪ್ರತಿಗಾಮಿತನದ ಕೈ ಎಷ್ಟು ಮೇಲಾಯಿತೆಂದರೆ, ಧಾರ್ಮಿಕ ಮುಸಲ್ಮಾನಗೆ-ತತ್ವಜ್ಞಾನ ಎಂದರೆ ನಾಸ್ತಿಕತೆ, ಅಪವಿತ್ರತೆ, ಅನೈತಿಕತೆಗಳಿಗೆ ಇನ್ನೊಂದು ಹೆಸರೆಂಬಂತಾಯಿತು. ತನ್ನ ಐತಿಹಾಸಿಕ ಪಾತ್ರ ನಿರ್ವಹಿಸಿ, ಇಸ್ಲಾಂ ಈಗ ತನ್ನ ಮೂಲಸ್ವರೂಪಕ್ಕೆ ದ್ರೋಹ ಬಗೆದು, ಟರ್ಕರ, ಅನಾಗರಿಕ ಮಂಗೋಲಿಯನ್ ದರೋಡೆಕೋರರ ಧರ್ಮವಾಯಿತು.

## ಮುಹಮ್ಮದನ ಧರ್ಮ ಮತ್ತು ಅದರ ಯಶಸ್ಸಿಗೆ ಕಾರಣಗಳು

ಜಗತ್ತಿನ ಮಾನವರಲ್ಲೆಲ್ಲ ಇಸ್ಲಾಂನ ಜನಕ ಮುಹಮ್ಮದನನ್ನು ಮಾನವ ಜನಾಂಗದ ಮೇಲೆ ಅಗಾಧವಾದ ಪ್ರಭಾವವನ್ನು ಬೀರಿದ ಮಹಿಮಾವಂತನೆಂದು ಕೈವಾರಿಸಲಾಗಿದೆ. ಅನೇಕ ದೇವ ದೇವತೆಗಳನ್ನು ಪೂಜಿಸುತ್ತ ಪರಸ್ಪರ ಕಚ್ಚಾಡುತ್ತಿದ್ದ ಅರಬ್ ಜನಾಂಗವನ್ನು ಒಟ್ಟುಗೂಡಿಸಲು, ಸರ್ವಶಕ್ತದೇವನೊಬ್ಬನ ಪ್ರಸಕ್ತಿಯಿಲ್ಲದೆ ಸಾಧ್ಯವಾಗುತ್ತಿರಲಿಲ್ಲ. ಅಂಥ ದೇವನಿಲ್ಲದಿದ್ದರೆ, ಅಂಥವನೊಬ್ಬನನ್ನು ಸೃಷ್ಟಿಸಬೇಕಾಗುತ್ತದೆಂಬುದು ಮುಹಮ್ಮದನ ಅಂದಿನ ಯೋಚನೆ. ಅವನ ಜೀವಿತೋದ್ದೇಶವೇ ಅದಾಗಿತ್ತು. ವ್ಯರ್ಥ ಅಧ್ಯಾತ್ಮದಲ್ಲಿ ತೊಡಗದೆ, ಪ್ರಾರ್ಥನೆ, ಪರಿಶುದ್ಧತೆ, ಉಪವಾಸ ಶಾಂತತೆ ಮೊದಲಾದುವುಗಳಲ್ಲಿ ತೊಡಗಿಸುವುದರ ಮೂಲಕ ತನ್ನ ಜನರ ಸಾಮಾಜಿಕ ಸ್ಥಿತಿಗತಿಗಳನ್ನು ಸುಧಾರಿಸುವುದರತ್ತ ಕಾರ್ಯ ತತ್ಪರನಾದ. ಎಲ್ಲಕ್ಕಿಂತ ಹೆಚ್ಚಾಗಿ ದಾನ ಧರ್ಮಕ್ಕೆ ಹೆಚ್ಚು ಒತ್ತು ಕೊಟ್ಟ. ಗುಣವಂತರಾಗಿದ್ದರೆ ಅವರು ಯಾವುದೇ ಧರ್ಮದವರಾದರೂ ಮೋಕ್ಷ ಪಡೆಯುವರೆಂದು ಹೇಳಿದ.

ಏಕೇಶ್ವರ ವಾದವೇ ಅದರ ತಿರುಳು. ಜಗತ್ತು ಶೂನ್ಯದಿಂದ ಸೃಷ್ಟಿಯಾಯಿತೆಂಬ ತತ್ತ್ವವನ್ನು ಇಸ್ಲಾಂ ಒಪ್ಪುವುದಿಲ್ಲ. ಜಗತ್ತನ್ನು ಸೃಷ್ಟಿಸಿದವನೂ ದೇವರೆ ಎಂದು ಹೇಳಿ ದೇವರ ಸರ್ವಶಕ್ತಿತ್ವಕ್ಕೆ ಹೆಚ್ಚು ಒತ್ತುಕೊಟ್ಟ. ಬೇರೆಲ್ಲ ಧರ್ಮಗಳಲ್ಲಿ ಜಗತ್ತು ತನಗೆ ತಾನೆ ಸರ್ವಸ್ವ, ಅದು ಮುಂಚೆಯೇ ಇತ್ತೆಂದು ಹೇಳಿ ಬಿಡುವುದರಿಂದ ದೇವರು ಅನಗತ್ಯನಾಗುತ್ತಾನೆ. ಈ ಕಾರಣಕ್ಕಾಗಿ ಉತ್ಕ್ರಾಂತ ಪರಿಶುದ್ಧ ರೂಪದ ಧರ್ಮದ ಮೂಲ ಪುರುಷನೆಂಬುದಾಗಿ ಇತಿಹಾಸದಲ್ಲಿ ಅವನ ಹೆಸರು ದಾಖಲಾಗಿದೆ. ಈ ದೃಷ್ಟಿಯಿಂದ ಅದು ಅವೈಚಾರಿಕತೆಯನ್ನು ಮೀರಿದ ಧರ್ಮವಾಗಿದೆ. ಉನ್ನತ ಮಟ್ಟದ ಧರ್ಮವಾಗಿದ್ದು ಅದೇ ಕಾಲಕ್ಕೆ ಅದು ಧಾರ್ಮಿಕತೆಯ ವಿಚಾರದ ಬುಡಕ್ಕೇ

ಕೊಡಲಿಪೆಟ್ಟು ಹಾಕುತ್ತದೆ. ದೇವರನ್ನು ಈ ಲೋಕದಿಂದ ಆಚೆ ಇರಿಸಿರುವುದರಿಂದ ಅವನನ್ನು ಬಿಟ್ಟೇ ನಡೆಯುವ ಸಾಧ್ಯತೆಯನ್ನು ಮುಂದೊಡ್ಡುತ್ತದೆ. ಕಟ್ಟಾ ಏಕೇಶ್ವರವಾದಿ ಧರ್ಮವಾಗಿ ಇಸ್ಲಾಂ, ಧಾರ್ಮಿಕ, ಮನೋಭಾವದ ಅಧಿಪತ್ಯಕ್ಕೊಳ ಪಟ್ಟಿದ್ದ ಮಾನವ ಚರಿತ್ರೆಯ ಅಧ್ಯಾಯಕ್ಕೆ ಕೊನೆ ಹೇಳಿತು. ಏಕೇಶ್ವರ ವಾದವನ್ನು ಪ್ರತಿಪಾದಿಸಿದ ಈ ಧರ್ಮ ಆಧುನಿಕ ವಿಚಾರವಾದಕ್ಕೆ ಅಸ್ತಿವಾದ ಹಾಕಿತು ಹಾಗೂ ಭೌತ ವಾದಕ್ಕೆ ಪ್ರೋಷಕವಾಯಿತು. ಈ ಅತಿ ಏಕೇಶ್ವರವಾದ ಮಹಮ್ಮದನು ದೈವೀ ವ್ಯಕ್ತಿ ಎಂಬ ಕಂಪೋಕ್ತ ಮಾತನ್ನೂ ಪ್ರಶ್ನಿಸುತ್ತದೆ.

ತನ್ನ ಸಂಸ್ಥಾಪಕನಿಗೆ ದೈವತ್ವಾರೋಪಣೆ ಮಾಡುವುದು ಇಸ್ಲಾಂನದ್ದೇ ಆದ ಮೂಲಭೂತ ಗುಣವೇನಲ್ಲ. ಎಲ್ಲ ಧರ್ಮದವರಲ್ಲೂ ಅದು ಕಂಡು ಬರುತ್ತದೆ. ಮಹಮ್ಮದ್ ಮೃತಿ ಹೊಂದಿದ ಕೂಡಲೇ ಈ ವಿಚಾರದಲ್ಲಿ ಅವನ ಅನುಯಾಯಿ ಗಳಲ್ಲಿ ಮತಭೇದ ಉಂಟಾಯಿತು. ಅವನ ಸಾವಿನ ಸುದ್ದಿ ಸಿರಿಯಾದ ವಿಜಯಕ್ಕೆ ಹೊರಟಿದ್ದ ಸೇನಾ ಶಿಬಿರವನ್ನು ತಲುಪಿತು. ಪ್ರವಾದಿ ಸಾಯಬಹುದೆಂಬುದನ್ನು ನಂಬದ ಅವನ ಭಕ್ತಶಿರೋಮಣಿ ಆ ವಾರ್ತೆ ತಂದ ವ್ಯಕ್ತಿಯ ಶಿರಚ್ಛೇದನ ಮಾಡು ವುದಾಗಿ ಬೆದರಿಕೆ ಹಾಕಿದಾಗ, ಗೌರವಾನ್ವಿತ ನಾಸ್ತಿಕ ಅಬುಬಕರ್ ಹೀಗೆ ಬುದ್ಧಿ ಹೇಳುತ್ತಾನೆ—"ನೀನು ಪೂಜಿಸುವುದು ಮಹಮ್ಮದನನ್ನೋ ಮಹಮ್ಮದನ ದೇವರನ್ನೋ ? ಮಹಮ್ಮದನ ದೇವರು ಶಾಶ್ವತ. ಅವನಿಗೆ ಸಾವಿಲ್ಲ, ಆದರೆ ದೇವ ರಿಂದ ಕಳುಹಿಸಲ್ಪಟ್ಟ ವ್ಯಕ್ತಿಯಾದ ಮಹಮ್ಮದ್ ನಮ್ಮ ಹಾಗೆಯೇ ಒಬ್ಬ ಮನುಷ್ಯ. ಎಲ್ಲರಂತೆ ಅವನು ಮೃತಿ ಹೊಂದಿದ್ದಾನೆ."

ಹೀಗೆ ಮಹಮ್ಮದನ ಮುಂದಿನ ಉತ್ತರಾಧಿಕಾರಿಯೇ ಅವನನ್ನು ದೇವರು ಕಳುಹಿಸಿದ ಮಾನವನೆಂದು ಕರೆದ. ಆದರಿಂದಾಗಿ ಇತರೆ ಎಲ್ಲಾ ಧಾರ್ಮಿಕ ಆಚಾರ್ಯರ ಸಾಲಿನಲ್ಲಿ ಅವನನ್ನು ನಿಲ್ಲಿಸಿದಂತಾಯಿತು. ಪ್ರವಾದಿಯ ದೈವೀ ವ್ಯಕ್ತಿತ್ವವನ್ನು ನಿರಾಕರಿಸುವುದರ ಮೂಲಕ ಇಸ್ಲಾಂ ನೂರಕ್ಕೆ ನೂರು ಏಕೇಶ್ವರವಾದಿ ಧರ್ಮವೆಂದು ಸಾಬೀತು ಪಡಿಸಿಕೊಂಡಿದೆ. ಪ್ರವಾದಿಗೆ ದೈವೀ ಸ್ವರೂಪ ಇಲ್ಲವೆಂದ ಮೇಲೆ ಧರ್ಮ ಗ್ರಂಥ ಪರಿಪೂರ್ಣವಾದ, ಪ್ರಶ್ನಾತೀತವಾದ ಮಾನ್ಯತೆ ಪಡೆಯಲಾರದು. ಮಾನವನ ಉಪದೇಶ ಎಂದಿಗೂ ಶಾಶ್ವತ ಸತ್ಯದ ಅಂತಸ್ತನ್ನು ಪಡೆಯುವುದಿಲ್ಲ. ಧಾರ್ಮಿಕ ವಿಧಿಗಳು ಪ್ರಶ್ನಾತೀತವೆಂದಾಗುವುದಿಲ್ಲ. ಇಸ್ಲಾಂನ ಕಟು ಏಕೇಶ್ವರವಾದದಿಂದಾಗಿ ಅದು ಧಾರ್ಮಿಕ ವಿಚಾರಗಳ ಸಂಕುಚಿತ ಪರಿಧಿಯನ್ನು ಮೀರಿ ಬೆಳೆದು ನಂಬಿಕೆಗಳ ಯುಗಕ್ಕೆ ಮುಕ್ತಾಯ ಹಾಡಿತು. ಅದರ ಪರಿಣಾಮ ಎಷ್ಟರಮಟ್ಟಿಗೆ ಅರಬ್ಬರ ಮೇಲಾಯಿತೆಂಬುದನ್ನೂ, ಆದರಿಂದಾಗಿ ವಿಚಾರ ಶಕ್ತಿಯ ಬಲಿ ವೇದಿಕೆಯ ಮೇಲೆ ನಂಬಿಕೆಯನ್ನು ನಿರ್ಭಯವಾಗಿ ಬಲಿ ಕೊಡಬಲ್ಲಂಥ ಮಹಾನ್ ಕ್ರಾಂತಿಕಾರಿ ವಿಚಾರ

ನೇತ್ರಗಳು ಅರಬ್ಬರಲ್ಲಿ ಉದಿಸಿದರೆಂಬುದನ್ನೂ ಈ ಹಿಂದೆಯೇ ನೋಡಿದ್ದೇವೆ. ಈ ವಿಧವಾದ ಬೌದ್ಧಿಕ ಪ್ರಗತಿಯ ಪ್ರಾದುರ್ಭಾವ ಮಹಮ್ಮದನ ಧರ್ಮದ ಅಂತಃಸತ್ವದಿಂದಲೇ ಆದದ್ದೆಂಬುದನ್ನು ಮನಗಂಡಾಗ ಇಸ್ಲಾಂನ ಐತಿಹಾಸಿಕ ಪಾತ್ರ ನಮಗೆ ಮನವರಿಕೆಯಾಗುತ್ತದೆ.

ಇಷ್ಟೆಲ್ಲ ಕ್ರಾಂತಿಕಾರಿ ಪಾತ್ರ ವಹಿಸಿದ ಇಸ್ಲಾಂ ಅನ್ನು ಅಸಂಖ್ಯಾತ ಜನ ಅನುಸರಿಸಿದ್ದು ತೀರ ಸಹಜವಾಗಿತ್ತು. ಇಸ್ಲಾಂನ ಯಶಸ್ಸಿಗೆ ಕಾರಣಗಳು ಹಲವಾರು. ರಾಯ್ ಅವರ ಪ್ರಕಾರ ಪ್ರವಾದಿಯ ತತ್ವ ಅವರ ಅನುಯಾಯಿಗಳಿಗೆ ಭವ್ಯ ಸ್ವರ್ಗದ ಭರವಸೆಯನ್ನಷ್ಟೇ ಕೊಡಲಿಲ್ಲ; ಜಗತ್ತನ್ನು ನಿರಾಕರಿಸದೆ ಈ ಜಗತ್ತಿನ ಭೋಗ ಭಾಗ್ಯಗಳೂ ಅಷ್ಟೇ ಮುಖ್ಯವೆಂದು ಸಾರಿತು. ಇಸ್ಲಾಂನ ಆಶ್ಚರ್ಯಕಾರಕ ಯಶಸ್ಸು ಎಷ್ಟರ ಮಟ್ಟಿಗೆ ಆಧ್ಯಾತ್ಮಿಕವೋ ಅಷ್ಟೇ ಮಟ್ಟಿಗೆ ಸಾಮಾಜಿಕ ಮತ್ತು ರಾಜಕೀಯವೂ ಆಗಿತ್ತು. ಇಸ್ಲಾಂನ ಅಸದೃಶ ಯಶಸ್ಸಿಗೆ ಕಾರಣ ಅದರ ಸಮಾನತೆ ಮತ್ತು ಸ್ವಾತಂತ್ರ್ಯದ ತತ್ವಗಳೇ ಆಗಿದ್ದುವೇ ಹೊರತು, ಅದರ ಸೈನಿಕ ಶಕ್ತಿಯಲ್ಲ. ಸೈನಿಕ ಶಕ್ತಿಯನ್ನು ಬಳಸಿದಾಗಲೂ ಅನೇಕ ಆಯ್ಕೆಗಳನ್ನು ನೀಡಲಾಯಿತು. ಕೊರಾನ್ ಅನ್ನು ಒಪ್ಪಿಕೊಳ್ಳಿ, ಇಲ್ಲ ಅರಬ್ಬರಿಗೆ ಕಪ್ಪ ಕಾಣಿಕೆ ಕೊಡಿ ಎಂದು ಹೇಳಲಾಯಿತು. ಮಹಮ್ಮದನ ಅನುಯಾಯಿಗಳು ಅಧಿಕ ಸಂಖ್ಯಾತರಾಗಿದ್ದಾಗಲೂ ಇವರಲ್ಲಿ ನಂಬಿಕೆಯಿಲ್ಲದವರು ತಮ್ಮ ಹಳೆಯ ಮತದಲ್ಲೇ ಉಳಿದು ಪೂಜಾ ವಿಧಾನಗಳನ್ನುಳಿಸಿಕೊಳ್ಳಲು ಅವಕಾಶವಿತ್ತು. ಸಹಿಷ್ಣುತೆಯೇ ಇಸ್ಲಾಂ ವ್ಯಾಪಕವಾಗಿ ಹರಡಲು ಕಾರಣ

ಇಸ್ಲಾಂ ಮತ್ತು ಭಾರತ

ರಾಯ್ ಅವರ ಈ ಗ್ರಂಥದಲ್ಲಿ ನಮ್ಮ ಗಮನವನ್ನು ವಿಶೇಷವಾಗಿ ಸೆಳೆಯುವ ಅಧ್ಯಾಯವೆಂದರೆ, ಇವರ ಕೊನೆಯ ಅಧ್ಯಾಯ "ಇಸ್ಲಾಂ ಮತ್ತು ಇಂಡಿಯಾ". ಪ್ರಾಚೀನ ನಾಗರಿಕತೆ ಮತ್ತು ಸಂಸ್ಕೃತಿಗಳನ್ನು ಹೊಂದಿದ್ದ ಭಾರತದಲ್ಲಿ ಇಸ್ಲಾಂ ಅಷ್ಟೊಂದು ವ್ಯಾಪಕವಾಗಿ ಹರಡಲು ಕಾರಣವಾದರೂ ಏನು ಎಂಬುದನ್ನು ಐತಿಹಾಸಿಕ ಹಿನ್ನೆಲೆಯಲ್ಲಿ ವಿಶ್ಲೇಷಿಸಿರುವುದು ರಾಯ್ ಅವರ **ವಿಶಿಷ್ಟತೆ.**

ಇಸ್ಲಾಂ ಈ ದೇಶಕ್ಕೆ ಬಂದಾಗ ಅದರ ಧುರೀಣತ್ವ ವಿದ್ವಾಂಸರಾದ ಮತ್ತು ಸುಸಂಸ್ಕೃತರಾದ ಜನರ ಕೈಯಿಂದ ಚ್ಯುತವಾಗಿತ್ತು. ಆದರೆ ಅದರ ಕ್ರಾಂತಿಕಾರಿ ತತ್ವಗಳು ಅದರ ಬಾವುಟದ ಮೇಲೆ ಇನ್ನೂ ಅಳಿಸಿರಲಿಲ್ಲ. ಇಂಡಿಯಾವನ್ನು ಇಸ್ಲಾಂ ಗೆದ್ದುಕೊಳ್ಳಲು ಸ್ಥಳೀಯ ಸಂದರ್ಭ ಸನ್ನಿವೇಶಗಳು ಅನುಕೂಲಕರವಾಗಿದ್ದುವು. ರಾಜಾ ಹರ್ಷವರ್ಧನ 7ನೇ ಶತಮಾನದ ಮಧ್ಯಭಾಗದಲ್ಲಿ ಮೃತನಾದ. ಭಾರತದಲ್ಲಿ ಆಗ ರಾಜಕೀಯ ವಿಘಟನೆ ಹೆಚ್ಚು ಕಡಿಮೆ ಇಸ್ಲಾಂನ ಪ್ರವರ್ಧಮಾನ

ಸ್ಥಿತಿಗೆ ಸಮಾನಾಂತರವಾಗಿ ಸಾಗಿತ್ತು. ಒಬ್ಬ ರಾಜನ ಮರಣ ಎಷ್ಟೇ ಮಹತ್ವಪೂರ್ಣವಾದುದಾದರೂ, ಇತಿಹಾಸದ ದಿಕ್ಕನ್ನು ಬದಲಾಯಿಸುವ ಬಿಂದುವಾಗಲಾರದು. ಈ ವಿಘಟನೆ ಅನೇಕ ಶತಮಾನಗಳಿಂದ ನಡೆಯುತ್ತಾ ಬಂದಿತ್ತು. ಬೌದ್ಧ ಧಾರ್ಮಿಕ ಕ್ರಾಂತಿ ಕೆಲಸಮಯ ಅದನ್ನು ತಡೆಹಿಡಿದಿತ್ತು. ಆದರೆ ಬ್ರಾಹ್ಮಣರ ಕಂದಾಚಾರ ಈ ಬೌದ್ಧ ಧಾರ್ಮಿಕ ಕ್ರಾಂತಿಯನ್ನು ಹತ್ತಿಕ್ಕಿತು.ಬೌದ್ಧ ಧರ್ಮದ ಪತನದ ನಂತರ ದೇಶ ಆರ್ಥಿಕ ದುಃಸ್ಥಿತಿಯ, ರಾಜಕೀಯ ತುಳಿತದ, ಬೌದ್ಧಿಕ ಅನಾಯಕತೆಯ, ಆಧ್ಯಾತ್ಮಿಕ ಗೊಂದಲದ ಅತ್ಯಂತ ಹೀನ ದೆಸೆಗೆ ಸಿಲುಕಿತ್ತು. ವಾಸ್ತವವಾಗಿ ಇಡೀ ಸಮಾಜವೇ ಕೊಳೆತು ನಾರುವ ದುರಂತ ಸ್ಥಿತಿಯನ್ನು ತಲುಪಿತ್ತು. ಅದರಿಂದಾಗಿಯೇ ದಮನಕ್ಕೊಳಗಾದ ಕೆಳವರ್ಗದ ಜನರಷ್ಟೇ ಸಾಮಾಜಿಕ ಸಮಾನತೆ ನೀಡಿದ ಇಸ್ಲಾಂ ಅನ್ನು ಅನುಸರಿಸಿದ್ದಲ್ಲದೆ, ಮೇಲ್ವರ್ಗದ ಜನತೆಯೂ ತಮ್ಮದೇ ಆದ ಸ್ವಾರ್ಥಪರ ಉದ್ದೇಶಗಳಿಂದ ಹೊರಗಿನ ಆಕ್ರಮಣಕಾರಿಗಳಿಗೆ ತಮ್ಮ ಬೆಂಬಲ ಕೊಟ್ಟರು.

ಭಾರತದಲ್ಲಿ ಇಸ್ಲಾಂ ಪ್ರಸಾರವಾದ ಬಗ್ಗೆ ಹ್ಯಾವೆಲ್ ಅನ್ನುವವನು ಬರೆಯುವ ಮಾತುಗಳು ತುಂಬ ಮನನೀಯ. ಈತ ಹಿಂದೂ ಸಂಸ್ಕೃತಿಯ ಮಹಾ ಅಭಿಮಾನಿ ಇಸ್ಲಾಂ ಬಗ್ಗೆ ಯಾವುದೇ ಸಹಾನುಭೂತಿ ಹೊಂದಿರದವನು. ಅವನು ಹೇಳುವುದೆಂದರೆ—"ಇಸ್ಲಾಂ ಅನ್ನು ಅನುಸರಿಸಿದವರು, ಒಬ್ಬ ಮುಸಲ್ಮಾನ್ ನಾಗರಿಕನಿಗೆ ದೊರಕಬಹುದಾದ ಹಕ್ಕುಗಳೆಲ್ಲವನ್ನೂ ಪಡೆಯುತ್ತಿದ್ದರು. ಆ ನ್ಯಾಯಾಲಯಗಳಲ್ಲಿ ಎಲ್ಲ ವಿವಾದಗಳೂ ಇತ್ಯರ್ಥವಾಗುತ್ತಿದ್ದುದು. ಕುರಾನ್ ಪ್ರಕಾರವೇ ಹೊರತು, ಆರ್ಯ ನ್ಯಾಯ ಪದ್ಧತಿಯ ರೀತಿ ಅಲ್ಲ. ಬ್ರಾಹ್ಮಣರ ನಿಷ್ಠುರ ನ್ಯಾಯಗಳಿಂದ ತೊಂದರೆಗೀಡಾಗಿದ್ದು ಮತಾಂತರಗೊಂಡ ಹಿಂದೂಗಳ ಕೆಳವರ್ಗದ ಜನತೆಯಲ್ಲಿ ಈ ನ್ಯಾಯ ವಿಧಾನ ತುಂಬ ಜನಪ್ರಿಯವಾಯಿತು." ಮಹಮ್ಮದೀಯ ಆಕ್ರಮಣದ ಸಮಯದಲ್ಲಿ ಬ್ರಾಹ್ಮಣರ ಸಾಂಪ್ರದಾಯಿಕ ಕಂದಾಚಾರಗಳಿಗೆ ಹಾಗೂ ಹಿಂದೂ ನೀತಿ ನಿಯಮಾವಳಿಗಳಿಗೆ ನಿಷ್ಠರಾಗಿರಲು ಕಿಂಚಿತ್ತೂ ಕಾರಣವಿಲ್ಲವೆಂಬಂಥ ಜನರಿದ್ದರು. ಅಷ್ಟೇಅಲ್ಲ, ಅವರು ಹಿಂದೂ ಧರ್ಮಕ್ಕಿಂತ ಹೆಚ್ಚು ಸಮಾನತೆಯ ವಿಧಿಗಳನ್ನು ಹೊಂದಿರುವ ಇಸ್ಲಾಂ ಅನ್ನು ಅಂಗೀಕರಿಸುವ ಸಲುವಾಗಿ ತಮ್ಮ ಹಿಂದಿನ ಪರಂಪರೆಯಿಂದ ಕಡಿದುಕೊಳ್ಳಲು ಸಿದ್ಧರಿದ್ದರು. ಈ ಸಮಾನ ಕಾನೂನುಗಳು ಹಿಂದೂ ಪ್ರತಿಗಾಮಿತನದ ವಿರುದ್ಧ ಅವರಿಗೆ ರಕ್ಷಣೆ ನೀಡಿದುವು.

ಭಾರತದಲ್ಲಿ ಅಷ್ಟೊಂದು ಜನರನ್ನು ಇಸ್ಲಾಂಗೆ ಮತಾಂತರ ಹೊಂದುವಂತೆ ಮನವೊಲಿಸಲು ಕಾರಣವಾದದ್ದು ಇಸ್ಲಾಂನ ಸಾಮಾಜಿಕ ಕಾರ್ಯಕ್ರಮವೇ ಹೊರತು ಅದರ ಸಿದ್ಧಾಂತವಲ್ಲ. ತುಳಿತಕ್ಕೊಳಗಾದ ಜನತೆಯ ಬೆಂಬಲ ಪಡೆದ ಸಾಮಾಜಿಕ ಕಾರ್ಯಕ್ರಮದೊಂದಿಗೆ ಯಾವತ್ತೂ ಕೆಟ್ಟ ಸಿದ್ಧಾಂತ ಅಥವಾ ಪ್ರತಿಗಾಮಿ ಜೀವನ

ಧೋರಣೆ ತಳುಕು ಹಾಕಿಕೊಂಡಿರಲು ಸಾಧ್ಯವಿಲ್ಲ. ಇಸ್ಲಾಂನ ಸಾಮಾಜಿಕ ಕಾರ್ಯಕ್ರಮ ಭಾರತದ ಜನ ಸಮುದಾಯದ ಬೆಂಬಲ ಗಳಿಸಲು ಕಾರಣ, ಇಸ್ಲಾಂನ ಸಾಮಾಜಿಕ ಅರಾಜಕತೆಗೆ ಕಾರಣವಾದ ಹಿಂದೂ ತತ್ವಶಾಸ್ತ್ರಕ್ಕಿಂತ ಉತ್ತಮವಾಗಿದ್ದುದೇ ಆಗಿದೆ. ಇಸ್ಲಾಂ ಇದರಿಂದ ಬಿಡುಗಡೆಯ ದಾರಿ ತೋರಿಸಿತು. ಅಂದರೆ ಇಸ್ಲಾಂ ತನ್ನ ಅವನತಿಯ ದಿನಗಳಲ್ಲೂ, ಹಿಂದೂ ಜಡ ಸಂಪ್ರದಾಯವಾದಕ್ಕೆ ಹೋಲಿಸಿದಲ್ಲಿ ಆಧ್ಯಾತ್ಮಿಕವಾಗಿ ವೈಚಾರಿಕವಾಗಿ ಮತ್ತು ಸಾಮಾಜಿಕವಾಗಿ ಪ್ರಗತಿಯ ಸಂಕೇತವಾಗಿತ್ತು.

ಭಾರೋಪೀಯ (Indo Europeon) ಸಂಸ್ಕೃತಿಯ ತೀವ್ರ ಪ್ರಶಂಸಕನಾದ ಹ್ಯಾವೆಲ್‌ನಂಥವನಿಗೂ ಹಿಡಿಸದ ಸಂಗತಿಗಳು ಭಾರತದಲ್ಲಿ ಆಗ ನಡೆಯುತ್ತಿದ್ದುವೆಂದರೆ, ಆಗಿನ ವಾತಾವರಣ ತೀರಾ ಶೋಚನೀಯವಾಗಿತ್ತೆಂದೇ ಅರ್ಥ. ಭಾರತದಲ್ಲಿ ಇಸ್ಲಾಂನ ಯಶಸ್ಸು ಆಂತರಿಕ ಕಾರಣಗಳಿಂದ ಆದದ್ದು. ಪ್ರವಾದಿಯ ಸಾಮಾಜಿಕ ಕಾರ್ಯಕ್ರಮ ಇಸ್ಲಾಂನಲ್ಲಿ ನಂಬಿಕೆಯಿರುವ ಪ್ರತಿಯೊಬ್ಬನಿಗೂ ಸಮಾನ ಆಧ್ಯಾತ್ಮಿಕ ಸ್ಥಾನಮಾನ ನೀಡಿತು. ಇಸ್ಲಾಂ ಎಂದರೆ ಜಗತ್ತನ್ನು ಅದು ಇರುವ ರೀತಿಯಲ್ಲೇ ಒಪ್ಪಿಕೊಳ್ಳುವಷ್ಟಕ್ಕೆ ತೃಪ್ತರಾದ ಸಾಮಾನ್ಯ ಜನಕೋಟಿಯ ಸಂಪೀ ಜೀವನಕ್ಕೆ ಪರ್ಯಾಪ್ತವಾದ ಜೀವನ ವಿಧಾನ.

**ಘಜನಿ ಮಹಮ್ಮದನ ಆಕ್ರಮಣ ಮತ್ತು ಭಾರತ**

ಘಜನಿ ಮಹಮ್ಮದನ ಆಕ್ರಮಣ ಕುರಿತು ರಾಯ್ ಹೇಳುವುದೆಂದರೆ— ಭಾರತೀಯ ಹಿಂದೂಗಳು ಅನಾದಿ ಕಾಲದಿಂದಲೂ ತಮ್ಮ ಕಾಣಿಕೆಗಳನ್ನು ಅರ್ಪಿಸುತ್ತಾ ಬಂದಿದ್ದ ತೀರ್ಥಕ್ಷೇತ್ರಗಳ ದೈವತ್ವಕ್ಕೆ ಮಹಮ್ಮದನ ಧಾಳಿಗಳು ಬಲವಾದ ಧಕ್ಕೆಯಿಟ್ಟುವು. ಪರಿಣಾಮವಾಗಿ ತಮ್ಮ ಪೂಜ್ಯ ದೇವತೆಗಳಲ್ಲಿದ್ದ ಗಾಢ ನಂಬಿಕೆಗೆ ಮತ್ತು ಪೂಜಾ ಸಮಯದಲ್ಲಿ ವ್ಯಕ್ತವಾಗುತ್ತಿದ್ದ ಧಾರ್ಮಿಕ ಭಾವನೆಗಳಿಗೆ ಬಲವಾದ ಕೊಡಲಿಪೆಟ್ಟು ಬಿತ್ತು. ಮಹಮ್ಮದನ ಧಾಳಿಕಾರರು ಬಂದಾಗ ಅಲ್ಲಿನ ಪೂಜಾರಿಗಳು ಹೇಳಿದ್ದು ದೇವತೆಗಳ ಉಗ್ರಕೋಪ ಅವರನ್ನು ಬಲಿ ತೆಗೆದುಕೊಳ್ಳುತ್ತದೆಂದು. ಆದರೆ ಜನರು ನಿರೀಕ್ಷಿಸಿದ ಪವಾಡವಾವುದೂ ನಡೆಯದೆ ಆಕ್ರಮಣಕಾರಿ ನಾಸ್ತಿಕನ ಧಾಳಿಯಿಂದ ನಂಬಿಕೆ ಶ್ರದ್ಧೆಗಳ ಆ ಭವ್ಯ ಮಂದಿರವೇ ಇಸ್ಪೀಟಿನ ಮನೆಯಂತೆ ಕುಸಿದು ಬಿತ್ತು. ಜನ ಸಮುದಾಯದ ಧಾರ್ಮಿಕ ಭಾವನೆಗಳು ಮತ್ತು ಆಧ್ಯಾತ್ಮಿಕ ಪ್ರವೃತ್ತಿಗಳು, ಅವರನ್ನು ತಮ್ಮ ನಿರ್ವೀರ್ಯ ದೇವತೆಗಳ ಮೇಲಿನ ಭಕ್ತಿ ಶ್ರದ್ಧೆ ಹಾಗೂ ನಿಷ್ಠೆಯನ್ನು ಆಕ್ರಮಣಕಾರಿಯ ಅಧಿಕ ಶಕ್ತಿ ಸಂಪನ್ನ ದೇವತೆಗೆ ಬದಲಾಯಿಸುವಂತೆ ಮಾಡಿದುವು.

## ಆಗಬೇಕಾದ ಪರಿವರ್ತನೆ

ಇಸ್ಲಾಂ ಬಗೆ ಇಷ್ಟೆಲ್ಲ ಹೇಳಿ ಕೊನೆಯಲ್ಲಿ ರಾಯ್ ಅವರು ಹಿಂದೂ ಮತ್ತು ಮುಸ್ಲಿಮರ ಮನೋಭಾವದಲ್ಲಿ ಆಗಬೇಕಾಗಿರುವ ಪರಿವರ್ತನೆ ಕುರಿತು ಅತ್ಯಂತ ನಿರ್ಣಾಯಕವಾದ ಮಾತುಗಳನ್ನು ಹೇಳಿದ್ದಾರೆ. ಮುಸ್ಲಿಂ ಆಕ್ರಮಣದ ವಿಮರ್ಶಾತ್ಮಕ ಶೋಧನೆಯಿಂದ ಹಿಂದೂಗಳು ಪೂರ್ವಗ್ರಹಗಳಿಂದ ಮುಕ್ತರಾಗಿ ಮುಸ್ಲಿಂ ಆಕ್ರಮಣದ ರಚನಾತ್ಮಕ ಪರಿಣಾಮಗಳನ್ನು ಮೆಚ್ಚುವ ಸ್ಥಿತಿಯಲ್ಲಿರುತ್ತಾರೆ. ಇತಿಹಾಸದ ಸರಿಯಾದ ಜ್ಞಾನ ಹೊಂದದ ಹೊರತು, ಪ್ರಾಚೀನ ನಾಗರಿಕತೆಯ ವಿಘಟನೆಯಿಂದ ಉಂಟಾದ ಅರಾಜಕತೆಯಿಂದ ಭಾರತೀಯ ಸಮಾಜ ಹೊರಬರದ ಹೊರತು ; ಹಿಂದೂಗಳು, ಮುಸಲ್ಮಾನರು ಈ ದೇಶದ ಅವಿಭಾಜ್ಯ ಅಂಗಗಳೆಂದು ಭಾವಿಸುವುದು ಸಾಧ್ಯವೇ ಇಲ್ಲ. ಇನ್ನೊಂದು ಕಡೆ, ಚರಿತ್ರೆಯಲ್ಲಿ ಇಸ್ಲಾಂ ವಹಿಸಿದ ಕೀರ್ತಿಶಾಲಿ ಪಾತ್ರದ ಪರಿಜ್ಞಾನ ನಮ್ಮ ಸಮಕಾಲೀನ ಮುಸ್ಲಿಮರಿಗೆ ತಿಳಿದೇ ಇಲ್ಲ. ಹಾಗೆ ಅವರು ತಿಳಿದದ್ದೇ ಆದರೆ, ಅರಬ್ಬರ ಸಂದೇಹವಾದ ಮತ್ತು ವೈಚಾರಿಕತೆಯನ್ನು ಕೊರಾನಿಗೆ ಅನುಗುಣವಾಗಿಲ್ಲವೆಂದು ಹೇಳುವುದಿಲ್ಲ. ಅದರ ಮೂಲ ಅಸಾಂಪ್ರದಾಯಿಕತೆ ಮತ್ತು ಅಧಾರ್ಮಿಕತೆ ಬಹು ಮುಖ್ಯ. ದೂರ ದೇಶದ ಈ ಧರ್ಮ ಇಷ್ಟೊಂದು ದೊಡ್ಡ ದೇಶವನ್ನು ಇಷ್ಟು ದೀರ್ಘಕಾಲ ಸ್ವಾಧೀನ ಪಡಿಸಿಕೊಂಡ ರಹಸ್ಯವಾದರೂ, ಇಸ್ಲಾಮೀ ತತ್ತ್ವಗಳು, ಭಾರತೀಯ ಸಮಾಜದ ಕೆಲವು ಐಹಿಕ ಆವಶ್ಯಕತೆಗಳನ್ನು ಈಡೇರಿಸಲು ಸಮರ್ಥವಾದುವೆಂಬುದೇ ಆಗಿದೆ. ಹಿಂದೂ ಸಮಾಜ ಜೀವನದ ಮೇಲೆ ಮುಸಲ್ಮಾನ್ ರಾಜಕೀಯ ಶಕ್ತಿಯ ಪ್ರಭಾವ ಎರಡು ರೀತಿಯದಾಗಿತ್ತು. ಅದು ಜಾತಿ ಪದ್ಧತಿಯ ಬಿಗುವನ್ನು ಹೆಚ್ಚಿಸಿತು ಮತ್ತು ಅದರ ವಿರುದ್ಧ ಪ್ರತಿಭಟನೆಯ ಕಿಡಿಯನ್ನು ಹೊತ್ತಿಸಿತು. ಹಿಂದೂ ಸಮಾಜದ ಕೆಳವರ್ಗದ ಜನತೆಗೆ ಅದು ತೋರಿಸಿದ ಉಜ್ವಲ ಭವಿಷ್ಯ ಅರಬ್ಬರಿಗೆ ಆಕರ್ಷಕವಾಗಿದ್ದಷ್ಟೇ ಆಕರ್ಷಕವಾಗಿತ್ತು. ಅದು ಶೂದ್ರನನ್ನು ಒಬ್ಬ ಮುಕ್ತ ಮನುಷ್ಯನನ್ನಾಗಿಸಿತು ಬ್ರಾಹ್ಮಣರ ಅಧಿಪತಿಯನ್ನಾಗಿ ಮಾಡಿತು. ಯುರೋಪಿನ ನವೋದಯದಂತೆಯೇ (ರಿನೇಸಾನ್ಸ್) ಇದೂ ಕೂಡ ಬುದ್ಧಿಜೀವಿ ವರ್ಗವನ್ನು ಅಲ್ಲೋಲಕಲ್ಲೋಲ ಗೊಳಿಸಿತು. ಅನೇಕ ಸಮರ್ಥರನ್ನು ನಿರ್ಮಿಸಿತು. ಬ್ರಾಹ್ಮಣರ ಕಂದಾಚಾರಗಳ ವಿರುದ್ಧ ಜನಪ್ರಿಯ ಆಂದೋಲನ ಪ್ರಾರಂಭಿಸಿದ ಕಬೀರ್, ನಾನಕ್, ತುಕಾರಾಮ್, ಚೈತನ್ಯ ಮೊದಲಾದ ಸುಧಾರಕರು ಕಾಣಿಸಿಕೊಂಡದ್ದು ಕೂಡ ಮಹಮ್ಮದೀಯ ಆಕ್ರಮಣದ ಸಾಮಾಜಿಕ ಪ್ರಭಾವಗಳ ಫಲವಾಗಿಯೇ.

ಇತಿಹಾಸದ ವಸ್ತುನಿಷ್ಠ ಅಧ್ಯಯನದಿಂದ, ಮುಸಲ್ಮಾನರ ಧರ್ಮ ಮತ್ತು ಸಂಸ್ಕೃತಿಗಿಂತ ತಮ್ಮದು ಶ್ರೇಷ್ಠವೆಂದು ಪರಿಗಣಿಸುವ ಮನೋಭಾವ ಅರ್ಥರಹಿತ.

ಅದು ಇತಿಹಾಸದ ಅಣಕ ಮತ್ತು ನಮ್ಮ ದೇಶದ ರಾಜಕೀಯ ಭವಿಷ್ಯಕ್ಕೆ ಹಾನಿಕಾರಕ.

ರಾಯ್ ಅವರು ತಮ್ಮ ಈ ಗ್ರಂಥವನ್ನು ಕೊನೆ ಮಾಡುವುದು ಈ ಚಿನ್ನದ ನುಡಿಗಳಿಂದ. ಅವರ ಅರ್ಥ ಪರಿಭಾವಿಸಿದಷ್ಟು ಹೆಚ್ಚುತ್ತಾ ಹೋಗುತ್ತದೆ. ಸಂಕುಚಿತ ದೃಷ್ಟಿಯ ಜನರಿಗೆ ಎಲ್ಲ ಕಾಲಕ್ಕೆ ದಾರಿ ದೀಪವಾಗಬಲ್ಲ ಬೆಳಕಿನ ಪುಂಜ ಇವು.

"ಮುಸ್ಲಿಮರಿಂದ ಪಾಠ ಕಲಿತು ಯೂರೋಪ್ ಆಧುನಿಕ ಸಂಸ್ಕೃತಿಯ ನೇತಾರನಾಯಿತು. ಇಂದಿಗೂ ಯೂರೋಪಿನ ಅತ್ಯುನ್ನತ ವ್ಯಕ್ತಿಗಳು ಮುಸ್ಲಿಂ ಸಂಸ್ಕೃತಿಗೆ ತಮ್ಮ ಹಿಂದಿನ ಋಣದ ಬಗ್ಗೆ ನಾಚಿಕೆ ಪಟ್ಟುಕೊಳ್ಳುವುದಿಲ್ಲ. ದುರದೃಷ್ಟದ ಮಾತೆಂದರೆ ಭಾರತ ಇಸ್ಲಾಂ ಸಾಂಸ್ಕೃತಿಕ ಪರಂಪರೆಯ ಪೂರ್ಣ ಪ್ರಯೋಜನ ಪಡೆಯಲಾಗಲಿಲ್ಲ. ಕಾರಣ ಆ ಅರ್ಹತೆ ಅದಕ್ಕಿರಲಿಲ್ಲ. ಈಗ, ನವ ಪುನರುತ್ಥಾನದ ಈ ಸಂಕಷ್ಟ ಸಮಯದಲ್ಲಿ ಭಾರತೀಯರು (ಹಿಂದೂ ಮುಸಲ್ಮಾನರಿಬ್ಬರೂ) ಮಾನವ ಚರಿತ್ರೆಯ ಆ ಸ್ಮರಣಾರ್ಹ ಅಧ್ಯಾಯದಿಂದ ಫಲಪ್ರದವಾಗಿ ಪ್ರೇರಣೆ ಪಡೆದುಕೊಳ್ಳಬಹುದು. ಮಾನವ ಸಂಸ್ಕೃತಿಗೆ ಇಸ್ಲಾಂನ ಕೊಡುಗೆಯ ಸರಿಯಾದ ತಿಳುವಳಿಕೆ ಮತ್ತು ಆ ಕೊಡುಗೆಯ ಐತಿಹಾಸಿಕ ಮೌಲ್ಯದ ಸರಿಯಾದ ಪರಿಗಣನೆಯು ಹಿಂದೂಗಳಿಗೆ ಅವರ ಅಹಂಕಾರಿ ಸ್ವಯಂ ತೃಪ್ತಿಯ ಬಗ್ಗೆ ದಿಗ್ಭ್ರಮೆ ಉಂಟು ಮಾಡುತ್ತದೆ. ಜೊತೆಗೆ ತಾವು ಆಚರಿಸುತ್ತಿರುವ ಧರ್ಮದ ನಿಜವಾದ ಅಂತಃಸತ್ವವನ್ನು ಅವರಿಗೆ ಮನಗಾಣಿಸುವುದರ ಮೂಲಕ ನಮ್ಮ ಕಾಲದ ಮುಸ್ಲಿಮರ ಸಂಕುಚಿತ ಮನೋಭಾವವನ್ನೂ ಸರಿಪಡಿಸುತ್ತದೆ."

ರಾಯ್ ಅವರು ಎಷ್ಟೋ ವರ್ಷಗಳ ಹಿಂದೆ ಹೇಳಿದ ಈ ಮಾತುಗಳು ಇಂದಿಗೂ ಪ್ರಸ್ತುತವೆನಿಸುತ್ತವೆ.

ಹೀಗೆ ಈ ಕೃತಿಯಲ್ಲಿ ರಾಯ್ ಅವರು ಇಸ್ಲಾಂನ ಮಹತ್ವ ಮತ್ತು ಅದರ ಇತಿಮಿತಿಗಳನ್ನು ನಮ್ಮ ಮುಂದಿಟ್ಟು ಭಾರತೀಯರಾದ ನಾವು ಅದರಿಂದ ಹೇಗೆ ಮಾರ್ಗದರ್ಶನ ಪಡೆಯಬಹುದೆಂಬುದನ್ನು ತಮ್ಮದೇ ವಿಚಾರಗಳಲ್ಲಿ ಗುರುತಿಸುತ್ತಾರೆ.

---

ಜಾತಿ-ಧರ್ಮಗಳು ಸಹಜ ಪ್ರೀತಿ-ಪ್ರೇಮಗಳನ್ನೇ ಅಸಾಧ್ಯಗೊಳಿಸಿರುವ ವಾತಾವರಣದಲ್ಲಿ ಜಾತ್ಯತೀತನಾಗುವ ಆಶಯ ತುಂಬ ಗೌರವದ್ದು. ಆದರೆ ಮುಕ್ತ ಜೀವನವೇ ಇಲ್ಲದ ಮುಚ್ಚಿದ ವ್ಯವಸ್ಥೆಯಲ್ಲಿ, ಧರ್ಮ–ಜಾತಿಗಳಿಂದ ಕಟ್ಟುಗೊಂಡ ನಮ್ಮ ಅನುಭವ–ಸಂವೇದನೆಗಳು, ಜಾತ್ಯತೀತ ನೆಲೆಯಲ್ಲಿ ಸೃಜನಶೀಲಗೊಳ್ಳುತ್ತಿರುವ ಬಗೆ ಹೇಗಿದೆ ಎಂಬುದು ಮುಖ್ಯವಾಗುವುದು.

—**ಡಾ॥ ರಹಮತ್ ತರೀಕೆರೆ**
(ಕನ್ನಡದ ಹೊಸ ಪ್ರತಿಭಟನಾ ದನಿಗಳು ಬರಹದಲ್ಲಿ)

---

# ಅವರಿಗೆ ಬೇಕಾಗಿತ್ತು ಲಿಫ್ಟು

—ಡಾ|| ನಾ. ಮೊಗಸಾಲೆ

ಅವರಿಗೆ ಬೇಕಾಗಿತ್ತು ಲಿಫ್ಟು
ಕೈಹಿಡಿದರು ಮಾರ್ಗದ ಮಧ್ಯೆ ನನ್ನೆದುರು
ನಿಲ್ಲಿಸಿ ಕೇಳಿದೆ 'ಎಲ್ಲಿಗೆ'?
"ಹೋಗೋಣ" ಅಂದರು ಮುಂದೆ
ನಾನು ಹೋಗುವ ರಸ್ತೆಯಲ್ಲೇ.

ಬಂತು ನನ್ನ ಮನೆ ಅಂದೆ
ಇಳಿಯಲಿಲ್ಲ ಅವರು
ಇಳಿದು ಹೇಳಿದೆ "ಮುಂದೆ ಹೋಗುವವನಲ್ಲ ನಾನು !"
ಹೇಳಿದರು ಅವರು :
"ಹೋಗಬೇಕಾಗಿತ್ತು ನಮಗೆ ಮುಂದೆ
ಇಷ್ಟು ಸಮೀಪವಾಗಿದ್ದರೆ ನಿಮ್ಮ ಮನೆ
ಬರುತ್ತಿರಲಿಲ್ಲ ನಿಮ್ಮೊಂದಿಗೆ
ಈಗ ನಮಗೆ ಹಿಂದಿನಷ್ಟೇ ಹಾದಿ
ಮುಂದೆಯೂ ಇದೆ !"

ಇಳಿಯಲಿಲ್ಲ ಹೀಗೆ ಇಬ್ಬರೂ
ಮಾತನಾಡಲೂ ಇಲ್ಲ ಮತ್ತೆ ಅವರು
ನನ್ನ ಕಾರನ್ನೇ ಅವರದೆನ್ನುವ ಹಾಗೆ
ನಿಶ್ಚಿಂತೆಯಿಂದ ಹಂಚಿಕೊಂಡರು
ಕುಳಿತರು ಸುಡುತ್ತಾ ಸಿಗರೇಟು
ಅವರನ್ನು ಒಯ್ಯುವುದು ಮುಂದೆ ಆತಂಕ
ಹಿಂದೆ ಕಳುಹಿಸುವುದಕ್ಕು ಇಲ್ಲ ಅರ್ಥ
ಇದೆಲ್ಲಿಯ ಬೊಬ್ಬೆಯರ್ಥ
ಏದು ನಿಂತೆ ನಿಶ್ಚಲ.

ಕುಳಿತ್ತೇ ಇದ್ದರು ನಿಂತ ಕಾರಿನಂತೆ ಅವರು
ಎಷ್ಟು ನಿಶ್ಚಲ ನಿಶ್ಚಿಂತ.
ನಾನೋ ಕಾರನ್ನೂ ಇವರನ್ನೂ ಬಿಟ್ಟು ಹೋಗುವವ. ಹೇಗೆ
ಕಾರು ನನ್ನದಾಗಿದ್ದೂ ನನ್ನದಲ್ಲದ ಹಾಗೆ.

ಎರಡು ಕವನಗಳು

## ೧. ಆಹ್ವಾನ

—ನಜೀರ್ ಚಂದಾವರ

ಅಯ್ಯಾ ತುಸು ತಾಳು
ಸವೆದು ಹೋದ ಹೊತ್ತು ಬಾಚುತ್ತಾ ಇದ್ದೇನೆ
ಉರುಳಿ ಹೋದ ದಿನಗಳ ಎಣಿಸುತ್ತಾ ಇದ್ದೇನೆ
ಈ ಊರುಗೋಲು ಆ ಪಂಚಭೂತ ಗೋಡೆ
ಕಾಲ–ಕನಸುಗಳು ಎಷ್ಟು ಸತ್ಯ ?
ಈ ಉರಿ ಬಿಸಿಲು ಇದರಡಿಯ ಕುಬ್ಜ ನೆರಳು
ಕಾಲ–ನೆನಪಿನಲಿ ಎಷ್ಟು ದಿಟ್ಟ ?
ಅಯ್ಯಾ ತುಸು ಬಿಡಿಸಿ ಹೇಳುವಿಯಾ-
ಬದುಕು ಉರುಳು ಚಕ್ರವೋ !
ಸಾವಿಗೆ ಅರಳುವ ಭ್ರಮೆಯೋ ?
ಸುಕ್ಕು ಸುಕ್ಕಾದ ಬದುಕಿಗೆ ಹಂಚಿ ಹೋದ
ಈ ಚೂರುಗಳ ನೆರಳು ಖಾಲಿ
ಪಕ್ವ ಮನಸುಗಳಿಗೆ ಬಿಚ್ಚಿ–ಬಚ್ಚಿಕೊಳ್ಳದ
ಆ ಅನಂತದ ಕೈಗೆಟುಕದ ನೀಲಿ
ಅಯ್ಯಾ ಸುತ್ತ ಕಟ್ಟಿದ ಕಕ್ಷೆಗೆ
ಹೆಜ್ಜೆಯ ದಾಖಲಿಸುವುದೇ ಹಲ್ಲಿ !
ಬಲಿಯ ಮುತ್ತಿಗೆಗೆ ಕಾಯುವುದೇ ಜೇಡ ?

ಇಲ್ಲ-ನಿರೀಕ್ಷಿಸುವುದಿಲ್ಲ ಆ ಗಳಿಗೆಯು-ಈ ಹೊತ್ತಿಗೆ
ಸುರುಳಿ ಸುತ್ತಿ ನೆರಳಿಗೆ ಬಂದ ಉಸಿರಿಗೆ
ಅಯ್ಯಾ ಇಲ್ಲ ಇನ್ನು ಧ್ಯಾನಿಸಲಾರೆ
ಇಲ್ಲಿ ಈ ನೆಲದ ನಿತ್ಯದಲಿ
ಈ ಬದುಕಿನ ಪುಟಗಳ ಮಜಲು-ಮೆಟ್ಟಲು
ಕಾಲ ಚಕ್ರದಡಿಯಿಂದೆದ್ದು ಬಂದ ಧೂಳು
ಒಂದಿಷ್ಟು ಬಾಚಿಕೊಳ್ಳಿ—ಅಲ್ಲಲ್ಲೇ ಮೆತ್ತಿ ನೋಡಿ
ನಿಲ್ಲುವುದಿಲ್ಲ ಒಡೆದ ಒಡಲು ತುಂಬುವುದಿಲ್ಲ
ಬಿರುಕು ಕಾಣುವುದು—ಇಲ್ಲ-ಬಿದ್ದು ಹೋಗುವುದು
ಖಂಡಿತ ನಿಲ್ಲುವುದಿಲ್ಲ -ನಿತ್ಯದಂತೆ ಈ ಪರಿಗೆ
ಅಯ್ಯಾ ಕಾಯಬೇಡ
ಹೊತ್ತು ಕಂತುತಿದೆ ಬಿಸಿಲು ಇಳಿಜಾರಿನಲಿ
ರೆಕ್ಕೆ ಬಿಚ್ಚಿ ಬಡಿದಿದೆ ಕತ್ತಲೆಗೆ ಬಾವಲಿ.

## ೨. ಅನಾವರಣ

ರೆಕ್ಕೆ ಬಿಚ್ಚಿ ನಿಂತ ಜೀವ ಬದುಕೇ ?
ಅಲ್ಲ—ಅದೊಂದು ಅನಿಸಿಕೆ
ನೆಲಪೂರಿ ಕೂತ ಸಮಯ ಕಾಲವೇ ?
ಅಲ್ಲ-ಅದೊಂದು ಭಾವನೆ
ತಿವಿಯುವ ಕಣ್ಣ-ನೇರ ನೋಟ ಗುರಿಯೇ ?
ಅಲ್ಲ—ಅದೊಂದು ಎಣಿಕೆ
ಈ ನೆಲ ಆ ಆಕಾಶ ಕಸರತ್ತು ಈ ಮಧ್ಯೆ
ಇದರ ನಡುವೆ
ಬದುಕು-ಹೇಳು ಯಾರಿಗೆ ?
ಈ ಮಣ್ಣು-ಬೂದಿ ಆ ಶೂನ್ಯ ನೀಲಿ
ಹೇಳು ಯಾರನ್ನ ಬಯಸುವೆ ?
ಇವಾ-ನಾಳೆಗಳ ಕಾಣುವ ಭರವಸೆಯೇ ?

# ಕತ್ತಲೆಯ ಗರಿ

—ಗೋಪಾಲಕೃಷ್ಣ ಭಟ್, ಒತ್ತಲಗದ್ದೆ

ಬೆಳಕು ಹರಿದ ಶೀತಲ ನೀಗೂಢತೆಗಳನು
ಮುಸುಕಿದ ನಾಲ್ಕು ಜಾವಗಳಲ್ಲಿ ಕತ್ತಲು
ಹಂತ-ಹಂತವಾಗಿ ಸ್ಫೋಟಿಸುವದೊಂದಿಗೆ ಅದು
ಸೃಜಿಸುವ ಸೊಡರನ್ನು ನುಂಗುವೆನು ನಾನು ನವಿರಾಗಿ
ಅರಮೆಯಲಿ ಹಾವು ಕಚ್ಚಿದ ಕಪ್ಪೆ ಬಗೆ.
ಕಣ್ಣು ಕಳೆದ ಕತ್ತಲೆಯ ಗವಿ-ಕ್ಷಿತಿಜದೊಳು
ಬರೆ-ಬರೆ ಅರೆಬಿಳಿಯ ಮಂಪರು ಪರದೆ ಬರೆದ
ಮೂಡದ ಅಕ್ಷರಗಳು, ಗೇಯದ ಗೀತಗಳು
ನೂರು ನೋವುಗಳ ಗರಿಗೆದರಿ ಗಾಬರಿಗೆ
ಗುರಿ ಮಾಡಿ ಮೆರೆದು ಬದುಕುವ ಬೆಸುಗೆ
ಅಂತರಾಳದ ತಂಗಳನ್ನ ಉಣಬಡಿಸುವ ಒಸಗೆ
ಅಪರದಲ್ಲಿ ಸೂರ್ಯ ಅಪ್ಯಾಯಮಾನವಾಗಿ ವಿಹರಿಸುವ
'ಸಸ್ಪೆನ್ಸ್'ನಲ್ಲಿ ಪಸ್ಸನೇ ಜಾರಿ ಬಿದ್ದ ನಂತರ
ಎಲ್ಲ ಧರ್ಮಗಳು ದಮನವಾಗುವ ಹಂದರ
ಎಲ್ಲಿ ನೆನಪುಗಳ ನೀರು ಆವಿಯಾಗುವಂತೆ
ಹಲವು ಪೇಲವ ಆಸೆ ಹೂ
ಪಕಳೆಗಳನರಳಿಸಿ ಕಾದ ಕಬ್ಬಿಣದ ಕೋಲಿನಲಿ
ಚುಚ್ಚಿ-ಚುಚ್ಚಿ ಸಾಯಿಸುವ ಸಂಚಾರೀ ಭಾವ
ಇದೊಂದು ವಿಪರ್ಯಾಸ ; ವಾಸ್ತವ
ವಿಸ್ತರಿಸಿದ ಭ್ರಮೆ ; ವಿಸ್ಮೃತ
ವಿವಸ್ತ್ರಗೊಳಿಸಿದ ಚೀತ್ಕಾರ ಎಷ್ಟು ಹತ್ತಿರ !
ಈ ಎಲ್ಲ ಬಲ್ಲಿಗಳ ನಡುವೆ ನೋವು ನೆನಪುಗಳ
ನಡುವೆ ಕತ್ತಲನು ಛೇದಿಸದ, ಯಾರೂ ಅರಿಯದ
ಎತ್ತಲೋ ಹಲ್ಕಿರಿದು ಹಾರಿ ಸೇರುವ

ನಗೆ ಒಂದುಂ ಕಿಡಿ ಒಡೆದು
ಮುಗಿಲ ಮುಡಿ ಸೇರಿತೋ, ಇಲ್ಲ
ಕಡಲ ಬುಡ ಸೇರಿತೋ !!!

(ಕವಿ ಗೋಪಾಲಕೃಷ್ಣ ಭಟ್, ಹಿತ್ತಲಗದ್ದೆ ನಮ್ಮನ್ನಗಲಿದ್ದಾರೆ. ಅವರು ಬಿಟ್ಟು ಹೋದ ಕವಿತೆಗಳಷ್ಟೇ ನಮಗೆ ನೆನಪು. ಉತ್ತರ ಕನ್ನಡ ಜಿಲ್ಲೆಯ ಬಂಡಾಯ ಸಂಘಟನೆಯಲ್ಲಿ ಸಕ್ರಿಯರಾಗಿದ್ದ ಗೋಪಾಲಕೃಷ್ಣ ಅತೀ ಕಿರಿಯ ವಯಸ್ಸಲ್ಲಿ ಸಾವು ತಂದುಕೊಂಡಿದ್ದು ದುಃಖವನ್ನುಂಟು ಮಾಡಿದೆ. ಇನ್ನಿಲ್ಲವಾದ ಈ ಗೆಳೆಯ ಕವಿಗೆ 'ಕತ್ತಲೆಯ ಗರಿ'ಯಷ್ಟೇ ಚಾದರ; ಶ್ರದ್ಧಾಂಜಲಿ-ನಮನ.

—ಸಂಪಾದಕ ಮಂಡಳಿ)

# ನನ್ನ ಗೋಳಿನ ಹಾಡು

—ಡಾ|| ಚೆನ್ನಣ್ಣ ವಾಲೀಕಾರ

ನಾನು ಹಾಡೊಂದನ್ನು ಹಾಡತೀನಿ ಕೇಳು ಗೆಳತಿ
ನನ್ನ ಪಾಡೊಂದನ್ನು ಹೇಳತೀನಿ ಕೇಳು ಗೆಳತಿ |ಪಲ್ಲವಿ|

ಬಡವನಾಗಿ ಹುಟ್ಟಿದಾರ ಬೆಳೆಯಲಿಕ್ಕೆ ಹೊಂಟಾರ
ಮ್ಯಾಲಿನೋರು ಸೇರ್‍ಯಾರ ಮಾಡ್ಯಾರೊಂದು ಹುನ್ನಾರ
ನಮ್ಮ ರಕ್ತ ಹರಿಸುತ್ತ ಹೋಳಿಹುಣ್ಣಿ ಮಾಡ್ಯಾರ
ನಮ್ಮ ಕರುಳು ತೂಗಿ ಹಾಕಿ ಕಾರ್ಹುಣ್ಣಿ ಕಡಿದಾರ |೧|

ಮ್ಯಾಲಿನೋರು ಹೀಂಗ್ಮಾಡಿದರ ಕೇಳ್ತೇನು ನಮ್ಮ ಜನರ
ಹಾವಾಗಿ ಕಚ್ಯಾರ ಚೇಳಾಗಿ ಕುಟುಕ್ಯಾರ
ಜಿಗಳಿ ಹಂಗ ಹೀರ್‍ಯಾರ ಹೆಗ್ಗಣಾಗಿ ಹತ್ಯಾರ
ಹೊಟ್ಟೆಕಿಚ್ಚಿನುರಿಯು ಯಾಕ ಹೇಳು ಯಾರು ಬಿತ್ಯಾರ |೨|

ಪರದೇಶ್ದ ಜನರೆಲ್ಲ ನಮ್ಮ ದೇಶದ ಜನರೆಲ್ಲ
ಎದೆಗೆ ಫಾಸಿ ಮಾಡ್ಯಾರ ಸಿತ್ಕ ಪಾಸಿ ಮಾಡ್ಯಾರ
ಯಾರಿಗಾಗಿ ಬದುಕಬೇಕು ಯಾರಿಗಾಗಿ ಬೆಳೆಯಬೇಕು
ನಮ್ಮೋರೆ ನಮಗ ಹಿಡಿದು ನೇಣಕೆ ಹಾಕ್ಯಾರ
ಯಾಕ ಹೀಂಗ ಹೇಳು ಗೆಳತಿ ಹೀಂಗಾದ್ರ ಹ್ಯಾಂಗ ಗೆಳತಿ

ನನ್ನ ಬಾಳ ಕೊನೆಯ ಸರತಿ ಉಳಿದಿರುವ ಸಂಗಾತಿ
ನೀನು ಬಿಟ್ಟರಿಲ್ಲ ನನಗೆ ಬಾಳೆಲ್ಲ ಕತ್ತಲರಾತ್ರಿ
ಜನುಮಕ ಅರ್ಥವಿಲ್ಲ ಎಂಬುದೀಗ ತಿಳಿದಾದ ಗೆಳತಿ ।೪।

ಹೀಂಗಾದ್ರ ದೇಶ ಹ್ಯಾಂಗ ಉಳಿತಾದ ಹೇಳ್ ಗೆಳತಿ
ಹೀಂಗಾದ್ರೆ ರಾಷ್ಟ್ರ ಹ್ಯಾಂಗ ಬೆಳಿತಾದ ಹೇಳ್ ಗೆಳತಿ
ಎಲ್ಲೋರ ಮೈಯಾನ ರಕ್ತ ಒಂದೆ ತಿಳಿದಾರ ಗೆಳತಿ
ಸಮದೃಷ್ಟಿ ಸಮಭಾವ ಬರತಾದ ಆಗ ಗೆಳತಿ ।೫।

ನನ್ನ ಚೆಲುವು ಒಲವು ನೀನೆ ನನ್ನ ನಲಿವು ಸಾವು ನೀನೆ
ರಾತ್ರಿ ಬರುವ ಚಂದ್ರ ನೀನೆ ಹಗಲು ಬರುವ ಸೂರ್ಯ ನೀನೆ
ಮಳೆಗಾಳಿ ಮುಗಿಲು ನೀನೆ ದಶದಿಕ್ಕು ಕಡಲು ನೀನೆ
ನಾನೆ ನೀನೆ ನೀನೆ ನಾನೆ ಆದಾಗ ದುಃಖಿಲ್ಲ ಗೆಳತಿ ।೬।

ರಾತ್ರಿಗ್ಯಾಂಗ ಬೆಳಗೂದು ಗೆಳತಿ ಕಲ್ಲಿಗ್ಯಾಂಗ ಅರಳೋದ್ ಗೆಳತಿ
ಮುಳ್ಳಿಗ್ಯಾಂಗ ಘಮಸೋದು ಗೆಳತಿ ಹಾವಿನಾಗ್ಯಾಂಗ ಬಾಳೋದು ಗೆಳತಿ
ದೇಶಕ್ದೇಶ ಧಗಧಗ ಉರ್ದಾಗೇನ್ ಮಾಡಲಿ ಗೆಳತಿ
ಕೊಂಡಿಮುಂಚಣ್ಣರಿಂದ ಉಳಿಯಲ್ಯಾಂಗ್ ಹೇಳ್ ಗೆಳತಿ ।೭।

ಉಳಿದೋರೇನ್ ಮಾಡಲಿ ಬಿಡಲಿ ನಮ್ಮ ಪ್ರಾಣ ಹೋದ್ರೆ ಹೋಗ್ಲಿ
ಹೋರಾಟ ತತ್ವ ಹಿಡಿದು ಜಯ ಜಯ ಸಾಧಿಸೋಣ
ಒಳ್ಳೆ ಬೆಳೆಯ ತರಲಿಕ್ಕೆ ಕೊಳೆ ತೆಗೆದು ಹಾಕಲಿಕ್ಕೆ
ವಿಶ್ವಾಮಿತ್ರ ಸೃಷ್ಟಿಯನ ಮಾಡೋಣ ಏಳ್ ಗೆಳತಿ

**ಪ್ರತಿಭೆ/ಪರಿಚಯ 3**

# ವಿದ್ಯಾ ಭರತನಹಳ್ಳಿ

ಹದಿ ಹರೆಯದಲ್ಲಿ ಎಲ್ಲರೂ ಕವಿಗಳೇ, ಆದರೆ ಹರೆಯ ಮಾಗಿ, ಪ್ರೌಢಾವಸ್ಥೆಗೆ ಪ್ರವೇಶಿಸುವ ಸಂಧಿ ಕಾಲದಲ್ಲಿ ಕಾವ್ಯಕ್ಕೆ ಹರೆಯ ಬಾರದೇ ಬಿಟ್ಟೋಡುವುದು. ಅಥವಾ ಪಕ್ವವಾಗದೇ ಜಾಳಾಗುವದು ಹಲವರ ದುರಂತ. ಉತ್ತರ ಕನ್ನಡ ಜಿಲ್ಲೆಯ ಇತ್ತೀಚಿಗೆ ಬೆಳಕಿಗೆ ಬರುತ್ತಿರುವ ಯುವ ಕವಯಿತ್ರಿ "ವಿದ್ಯಾ ಭರತನಹಳ್ಳಿ" ಕಾವ್ಯದ ಪ್ರಾರಂಭಿಕಾವಸ್ಥೆಯಲ್ಲಿಯೇ ತಮ್ಮನ್ನು ಕಾವ್ಯರಚನೆಗೆ ಗಂಭೀರವಾಗಿ

ತೊಡಗಿಸಿಕೊಂಡವರು. ಮಹಿಳಾ ಬರಹಗಳೆಂದರೇನೇ, ಎರಡನೆಯ ದರ್ಜೆಯ ಸಾಹಿತ್ಯವೆಂದು ಮೂದಲಿಸುತ್ತಿರುವವರಿಗೆ ಸವಾಲಾಗಿ, ಸಮಾಜದ ಎಲ್ಲ ಆಯಾಮಗಳ ಬದುಕಿನೆಲ್ಲ ಮಜಲುಗಳ, ಸೂಕ್ಷ್ಮ ನಿರೀಕ್ಷಣೆಯೊಂದಿಗೆ ಸಮರ್ಥವಾಗಿ, ಅಭಿವ್ಯಕ್ತಿಸುತ್ತ ನಾಲ್ಕು ಗೋಡೆಯಿಂದಾಚೆ ದಾಂಗುಡಿ ಇಡುತ್ತ, ಸಿದ್ಧ ಅಭಿಪ್ರಾಯಗಳನ್ನು ಅಳಿಸಲು, ಕೆಲವೇ ಮಹಿಳೆಯರಾದರೂ ಪ್ರಯತ್ನಿಸುತ್ತಿರುವುದು, ಒಳ್ಳೆಯ ಬೆಳವಣಿಗೆ. ಈ ವಿಚಾರದ ನೆಲೆಯಲ್ಲಿಯೇ ವಿದ್ಯಾ ಭರತನಹಳ್ಳಿಯವರೂ ತಮ್ಮ ವಿಶಿಷ್ಟ ಕಾವ್ಯಕೃಷಿಯಿಂದ ಗಮನ ಸೆಳೆಯುತ್ತಾರೆ.

ಸದ್ಯ ಹುಬ್ಬಳ್ಳಿಯ 'ಸಂಯುಕ್ತ ಕರ್ನಾಟಕ' ದಿನಪತ್ರಿಕೆಯ ಸಾಪ್ತಾಹಿಕ ಸೌರಭ ವಿಭಾಗದ ಕಾರ್ಯ ನಿರ್ವಾಹಕಿಯಾಗಿ ಸೇವೆ ಸಲ್ಲಿಸುತ್ತಿರುವ ಇವರ ಕಾವ್ಯಗಳು, ರಾಜ್ಯದ ಪ್ರಮುಖ ಪತ್ರಿಕೆಗಳಲ್ಲಿ ಈಗಾಗಲೇ ಪ್ರಕಟಿತವಾಗಿವೆ. ಕಾಲೇಜ್ ದಿನಗಳಲ್ಲಿ ಎರಡೆರಡು ಬಾರಿ, ರಾಜ್ಯಮಟ್ಟದ ಅಂತರ್ ಕಾಲೇಜ್ ಕವನ ಸ್ಪರ್ಧೆಯಲ್ಲಿ ಬಹುಮಾನಿತರು (ಬೆಂಗಳೂರಿನ ಕ್ರೈಸ್ಟ್ ಕಾಲೇಜು ಇತ್ಯಾದಿ) ತ. ರಾ. ಸು. ಸ್ಮಾರಕ ರಾಜ್ಯಮಟ್ಟದ ಕನ್ನಡ ಕವಿತಾ ಸ್ಪರ್ಧೆಯಲ್ಲಿ ಪ್ರಥಮ ಬಹುಮಾನ, ಮದ್ರಾಸಿನ "ಲಹರಿ" ಪತ್ರಿಕೆಯ ಕಥಾ ಸ್ಪರ್ಧೆಯಲ್ಲಿ ಪ್ರಥಮ, ಮುಂತಾದವು ಅವರ ಸಾಧನೆಯ ಇನ್ನಿತರ ವಿವರಗಳು.

ಸಧ್ಯದ ಸಾಮಾಜಿಕ ಸ್ಥಿತಿ-ಗತಿ ಮುಂದಾಳುಗಳೆನ್ನಿಸಿಕೊಂಡವರ ಗೋಸುಂಬೆತನ, ಮನುಷ್ಯ ಸಂಬಂಧಗಳಲ್ಲಿಯ ಯಾಂತ್ರಿಕತೆ, ಭಾರತೀಯ ಮಹಿಳೆಯ ದಯನೀಯ ಸ್ಥಿತಿ, ಪುರುಷ ಪ್ರಭುತ್ವದ ಕಪಿಮುಷ್ಟಿಯೊಳಗೆ ಸಿಲುಕಿ ನಲುಗುತ್ತಿರುವ ಹೆಣ್ಣಿನ. ಬದುಕಿನ ರೀತಿ, ಮುಂತಾದ ಹಲವು ಸಮಸ್ಯೆಗಳಿಗೆ ತಮ್ಮ ಅನುಭವದ ಮಿತಿಯಲ್ಲಿ ಉತ್ತರಿಸಲು ವಿದ್ಯಾ ಪ್ರಯತ್ನಿಸಿದ್ದಾರೆ.

ದಿನವುರುಳಿ ರವಿ ನರಳಿ ಋತು ಅರಳಿದಂತೆಲ್ಲಾ/ಅನುಭವದ ಉಗ್ರಾಣ ಕೊಬ್ಬಿಕೊಳ್ಳುತ್ತಿದೆ/ ನರ ನರದ ಒಳಗೆ ರಕ್ತ ರಂಜಕವಾಗುತ್ತಿದೆ/ ಈತನಕ ಇಲ್ಲದ್ದು ಈಗ ಉದ್ಭವಗೊಂಡಿದೆ/ (ಅವಸ್ಥೆ) ಎನ್ನುತ್ತ ಮೈ-ಮನಸ್ಸುಗಳ ಅವಸ್ಥಾಂತರದ ವೈರುಧ್ಯವನ್ನು ವಿವರಿಸುತ್ತ, ಕಲ್ಪನೆಯ ಬದುಕಿಗೂ, ಕಟುವಾಸ್ತವಕ್ಕೂ ಇರುವ ವೈರುಧ್ಯವನ್ನು ಕವನದ ಮೂಲಕ ಚಿತ್ರಿಸುತ್ತಾರೆ. ಇಂಥದೇ ಆಶಯ ಅವರ ಸಾಲ್ಕಾರು ಕವನಗಳಲ್ಲಿ ಚಿತ್ರಿತವಾಗಿದೆ (ನಾನು ಒಳ್ಳೆಯವಳು—ಅಂದಿನಿಂದೀವಾಗ, ಆಟ, ಅಪಶ್ರುತಿ ಇತ್ಯಾದಿ)

ಇವರ ಈವರೆಗೆ ಪ್ರಕಟವಾದ ಕವನಗಳಲ್ಲಿ ತನ್ನ ಬಂಡಾಯ ಧೋರಣೆಯಿಂದ ನಿರ್ಭೀತ ಅಭಿವ್ಯಕ್ತಿಯಿಂದ ಗಮನ ಸೆಳೆಯುವ ರಚನೆಯೆಂದರೆ 'ಇತ್ಯರ್ಥ' ಎಂಬ ಕವನ: ಒಳಮನೆಯ ಮೂಲೆಯ ಬೆಂಕಿಗೆ ಮೈಯೊಡ್ಡಿ/ಅವರವರ ಬೆನ್ನು ಅವರೇ ಚಪ್ಪರಿಸಿ/ಸಮಾಧಿಂದು ಗಡದ್ದನೇ ತೇಗಿ/ ಇವರು ಬಿಟ್ಟ ಹೂಸು ಮನೆಯನ್ನೆಲ್ಲಾ ವ್ಯಾಪಿಸಿ— ಎಂದೆನ್ನುತ್ತ

ಇಂದಿನ ಗೋಸುಂಬೆಯಂಥ ಜನನಾಯಕರ ಒಂದೊಂದೇ ಬಣ್ಣವನ್ನು ಬಯಲಿಗ
ಯುತ್ತಾ, ಅವರ ಮುಗ್ಧ ಅಸಹಾಯಕ ಜನರಮೇಲೆ ಸಮೂಹ ಸನ್ನಿ ಪ್ರಯೋಗಿ
ಶೋಷಿಸುವ ರೀತಿಯನ್ನು ವರ್ಣಿಸುತ್ತ—

ನನ್ನ ಮೇಲೆರಗಿ ಗರ್ಭಿಸಿ, ಸಂತಾನದ ಪಟ್ಟಿಯಲ್ಲಿ
ಹೆಸರು ನೋಂದಾಯಿಸಲು ತವಕ ಪಡುತ್ತಿರುವಾಗ ನಾನು
ಅವಶೇಷಗಳ ಚಿಪ್ಪೊಡೆದು ಹೊರಬಂದು ಹೊಕ್ಕಳ ಬಳ್ಳಿ
ಕಿತ್ತೊಗೆದು...ಇವರೊಡನೆ ಗುದ್ದಾಡಿ ಜೀವ ರಕ್ಷಿಸಿಕೊಳ್ಳುತ್ತೇನೆ

ಎಂದು ಸವಾಲೊಡ್ಡುತ್ತಾರೆ.

ವಿದ್ಯಾ ಭರತನಹಳ್ಳಿ, ಸಧ್ಯ ತಮ್ಮ ಪ್ರಾರಂಭಿಕ ಕೆಲವೇ ಕವನಗಳಿಂದ ಬೆಳೆ
ಬಲ್ಲೆನೆಂಬ ಆತ್ಮವಿಶ್ವಾಸವನ್ನು ವ್ಯಕ್ತಪಡಿಸಿದ್ದಾರೆ. ಅವರೆಲ್ಲ ಕವನಗಳೂ, ವಾಚ್ಯತೆ
ಬದಲು ಸೂಚ್ಯತೆಯನ್ನು ಪಡೆದರೆ, ಜಾಳುತನವನ್ನು ಬಿಟ್ಟು ಲಕ್ಕೆ ಮೂಷಿವ
ದರೆ ಇನ್ನೂ ಪರಿಣಾಮಕಾರಿಯಾಗಬಹುದಿತ್ತು. ಜೊತೆಗೆ ಕಾವ್ಯದ ಅಭಿವ
ಸೌಮ್ಯವಾಗಿ ಓದುಗನನ್ನು ಗಾಢವಾಗಿ ಕಾಡುವ ಗುಣ ಹಲವು ಕವನಗಳಲ್ಲಿರುವ
ಸಮಾಧಾನ ಸಂತೋಷ.

—ಸುಬ್ರಾಯ ಮತ್ತಿಹ

ಎರಡು ಕವನಗಳು

## ೧. ಅವಸ್ಥೆ

ದಿನವುರುಳಿ ರವಿ ನರಳಿ ಋತು ಅರಳಿದಂತೆಲ್ಲಾ
ಅನುಭವದ ಉಗ್ರಾಣ ಕೊಬ್ಬಿಕೊಳ್ಳುತಿದೆ
ನರ ನರದ ಒಳಗೆ ರಕ್ತ ರಂಜಕವಾಗುತಿದೆ
ಈ ತನಕ ಇಲ್ಲದ್ದು ಈಗ ಉದ್ಭವಗೊಂಡಿದೆ!

ಈ ಇಳಿಯ ಹದಿನಾರು ವರ್ಷಗಳ
ಮೈ ಶಾಖ ಪಡೆದು ಪುಷ್ಟಿಯಾಗಿರಲು
ವಸಂತ ನನ್ನತ್ತ ನೋಡಿ ಹಲ್ಕಿರಿದಾಗ
ಮೈ ಮನದಲ್ಲಿ ಗೊಮ್ಮಟನ ನೆನಪು

ಮೊನ್ನೆ ಸಂತೆಯಲಿ ನೂರು ಜೊತೆ ಕಣ್ಣುಗಳು
ನಕ್ಕು ಕಚುಗುಳಿಯಿಟ್ಟಾಗ
ತುಟಿ ಮೇಲೆ ಮೆಲು ಮೆಲನೆ ನಗುಮೂಡಿ
ಮುಗುಳಾಗಿ ಮತ್ತೆ ಹೂವಾಯಿತು ಮೋಡಿ

ನೂರು ರೀತಿಯ ಜನರ ನೂರು ಬಾಳ್ವೆಯ ಕಂಡು
ನನ್ನಂತಿರುವ ಈ ನೂರು ಹುಚ್ಚರ ತೆರದಿ
ಅವರಲ್ಲಿ 'ಗುರುವ' ಹುಡುಕುತ್ತಿದ್ದೇನೆ
ಈಗ ಕತ್ತಲಿನಲಿ ತಡವರಿಸುತ್ತಿದ್ದೇನೆ.

## ೨. ಮುಂಗಾರು

ಮುಂಗಾರು ಮಳೆ ಧುತ್ತೆಂದು ಎರಗಿದಾಗ
ಮೈ ಮನದ ಕೊಂಬೆಗಳು
ಕವಲೊಡೆದು ಕೊನರಿ
ಪ್ರತಿ ಚಿಗುರು ಹೂತ ಹೂಬಳ್ಳಿ ಮಧ್ಯೆ
ಇಬ್ಬನಿಗಳ್ಹೆಣೆದ ಹೊಚ್ಚ ಹೊಸ ಹಾರಗಳ
ಪಾರದರ್ಶಕ ಥಳುಕಿನಲ್ಲಿ

ಶ್ರಾವಣ ಚೂರು ಚೂರಾಗಿ
ಮಟ ಮಟ ಮಧ್ಯಾಹ್ನದ
ಕಣ್ಣು ಕುಕ್ಕುವ ಸೂರ್ಯ ಸತ್ತುಬಿದ್ದ
ಹನಿ ಹಡೆದ ಆಕಾಶ
ಸಿಕ್ಕ ಸಿಕ್ಕ ವಸ್ತುಗಳನ್ನು ತುದಿ ಹಲ್ಲುಗಳಿಂದ
ಮೃದುವಾಗಿ ಕಚ್ಚುತ್ತಾ ನಡೆದಾಗ
ರೋಮಾಂಚನ ಹುಚ್ಚು ಹೊಳೆ
ಹಿರಿ ಹಿರಿ ಹಿಗ್ಗಿ ಹರಿದು
ಬದುಕಿನ ಮುಖಜ ಭೂಮಿಯಲಿ ಭೋರ್ಗರೆದು
ಸಾಗರ-ಸಮುದ್ರದಂಗಳದಲ್ಲಿ
ತೆರೆಗಳ ಢಿಕ್ಕಿಯಾಟ.

—ವಿದ್ಯಾ ಭರತನಹಳ್ಳಿ

# ಇಕಿರುವಿನಲ್ಲಿ ಕಾಣುವ ಬದುಕಿನ ಅರ್ಥಗಳು

—ಬಂದಗದ್ದೆ ರಾಧಾಕೃಷ್ಣ

"ಯಾವಾಗಾದರೊಮ್ಮೆ ನಾನು ನನ್ನ ಸಾವಿನ ಬಗ್ಗೆ ಯೋಚಿಸುತ್ತೇನೆ. ಈಗ ಹೀಗೆ ನಾನು ಬದುಕಿರುವಾಗಲೇ ಒಂದು ದಿನ ನಾನು ನನ್ನ ಕೊನೆಯುಸಿರು ಬಿಡಬೇಕಾಗುತ್ತದಲ್ಲ, ಅದನ್ನು ಹೇಗೆ ತಾನೆ ಸಹಿಸಬಲ್ಲೆ—ಎಂದು ವಿಸ್ಮಯಗೊಳ್ಳುತ್ತೇನೆ. ಈ ಬದುಕನ್ನು ಹೇಗೆ ತಾನೆ ತ್ಯಜಿಸುವುದು ? ಇಲ್ಲಿ, ನಾನು ಮಾಡಬೇಕಾದದ್ದು ಇನ್ನೆಷ್ಟೋ ರಾಶಿ ರಾಶಿ ಉಳಿದಿದೆಯಲ್ಲ ಅನಿಸುತ್ತದೆ ; ಈ ತನಕವೂ ನಾನು ಬದುಕಿದ್ದು ತೀರ ಹ್ರಸ್ವ ಎನ್ನಿಸತೊಡಗುತ್ತದೆ. ಚಿಂತಿಸ ತೊಡಗುತ್ತೇನೆ. ದುಃಖವಲ್ಲ, ಚಿಂತನೆ. ಅಂಥ ಚಿಂತನೆಯ ಪ್ರಕ್ರಿಯೆಯಲ್ಲಿಯೇ ಇಕಿರು ಹುಟ್ಟಿಕೊಂಡಿದ್ದು"—ಕಥೆ ಗರ್ಭ ಧರಿಸಿದ ರಹಸ್ಯವನ್ನು ಕುರೋಸವ ಹೀಗೆ ಹೇಳುತ್ತಾರೆ.

ಅಕಿರ ಕುರೋಸವ (ಹುಟ್ಟಿದ್ದು ೧೯೧೦) ಜಪಾನ್ ದೇಶದವರು. ಜಗತ್ತಿನ ಶ್ರೇಷ್ಠ ಚಲನಚಿತ್ರ ನಿರ್ದೇಶಕರಲ್ಲಿ ಒಬ್ಬರು. ರಶೋಮನ್, ಸವೆನ್ ಸಮುರಾಯ್ ಮುಂತಾದವು ಇವರ ಪ್ರಸಿದ್ಧ ಚಿತ್ರಗಳು.

ಜಪಾನಿ ಭಾಷೆಯಲ್ಲಿ ಇಕಿರು ಎಂದರೆ ಜೀವನ, ಬದುಕು, ಎಂದರ್ಥ. Contemporary Japenese Literature (Ed : Hibbet Howard, 1978) ಗ್ರಂಥವನ್ನು ಆಧರಿಸಿ ಇಂಗ್ಲಿಷ್ ಮೂಲದಿಂದ ಕೃಷ್ಣಹಾಸನ ಈ ಚಿತ್ರ ಲೇಖನವನ್ನು ಕನ್ನಡಕ್ಕೆ ಅನುವಾದಿಸಿದ್ದಾರೆ. ದೃಶ್ಯದ ವಿವರಗಳು, ಅಲ್ಲಿನ ಕ್ರಿಯೆ, ಕ್ಯಾಮರಾದ ಕೆಲಸ, ಸಂಭಾಷಣೆ ಇತ್ಯಾದಿಗಳನ್ನೆಲ್ಲ ಲೇಖಕರು ಹೇಳುತ್ತ ಹೋಗುತ್ತಾರೆ.

ನಾಗರಿಕ ವಿಭಾಗದ ಮುಖ್ಯಸ್ಥನಾದ ವಾಟನಬಿಯ ಬದುಕನ್ನು ಈ ಕೃತಿ ಚಿತ್ರಿಸುತ್ತದೆ. ಕೃತಿಯನ್ನು ಎರಡು ಭಾಗಗಳನ್ನಾಗಿ ವಿಂಗಡಿಸಿಕೊಳ್ಳಬಹುದು. ಒಂದು : ವಾಟನಬಿಯ ನಿಧನದ ಮೊದಲ ಕಥೆ, ಎರಡು : ನಿಧನದ ನಂತರದ್ದು.

ಕಥೆ ಪ್ರಾರಂಭವಾಗುವುದೇ ಕ್ಯಾನ್ಸರ್ ರೋಗದ ಲಕ್ಷಣಗಳುಳ್ಳ ಒಂದು ಎಕ್ಸ್‌ರೇ ನೆಗಟಿವ್‌ನ ಕ್ಲೋಸ್-ಅಪ್ ಕಾಣುವುದರಿಂದ. ಕಥೆಯ ಕೇಂದ್ರ ವ್ಯಕ್ತಿ ವಾಟನಬಿಯ ಎಕ್ಸ್–ರೇ ಚಿತ್ರ ಅದು.

ಕುರೋ-ಚೋ ದ ಒಂದು ಸ್ಥಳ ಹಾಳಾಗುತ್ತಿದೆ. ಅಲ್ಲಿ ದುರ್ನಾತ ಶುರು ವಾಗಿದೆ. ನೀರು ಮಲಿನವಾಗಿದೆ. ಆ ಸ್ಥಳದ ಬಗ್ಗೆ ನಾಗರಿಕ ವಿಭಾಗದವರು ಕಾಳಜಿ ವಹಿಸಿ ಕೆಲಸ ಮಾಡಿದರೆ ಅದೊಂದು ಆಟದ ಮೈದಾನವೋ, ಉದ್ಯಾನವನವೋ ಆಗುವ ಸಾಧ್ಯತೆಯಿದೆ. ಕುರೋ-ಚೋ ದ ಕೆಲವು ಮಹಿಳೆಯರು ಈ ಬಗ್ಗೆ ಅರ್ಜಿ ಬರೆದು ತಂದಿದ್ದಾರೆ. ಸಹಾಯಕ ಅರ್ಜಿದಾರರು ಬಂದ ವಿಷಯವನ್ನು ವಾಟನಬಿಗೆ ತಿಳಿಸಿದಾಗ ಅರ್ಜಿದಾರರನ್ನು ಲೋಕೋಪಯೋಗಿ ಇಲಾಖೆಗೆ ಕಳುಹಿಸಲು ಹೇ ಳುತ್ತಾನೆ. ಪ್ರತಿ ಇಲಾಖೆಯವರೂ ಇದು ಮತ್ತೊಂದು ಇಲಾಖೆಗೆ ಸಂಬಂಧಿಸಿದ್ದೆಂದ ಹೇಳುತ್ತ ಅರ್ಜಿದಾರರನ್ನು ಹತ್ತು-ಹನ್ನೊಂದು ಇಲಾಖೆಗೆ ಅಲೆಸುತ್ತಾರೆ. ಶಿಶು ಕಲ್ಯಾಣಾಧಿಕಾರಿ ಇಂಥ ಬೃಹತ್ ಸಮಸ್ಯೆಗಳನ್ನು ಸಿಟಿ ಕೌನ್ಸಿಲರ್ ಪರಿಹರಿಸಬೇಕು, ನಾನೇ ಸ್ವತಃ ಉಪಮೇಯರ್‌ಗೆ ತಿಳಿಸುತ್ತೇನೆಂದು ಹೇಳಿ, ಹಾಗೆ ಮಾಡುತ್ತಾನೆ. ಇಂತಹ ಸಲಹೆಗಳನ್ನು ಸ್ವೀಕರಿಸುವ ಸಲುವಾಗಿಯೇ ನಾಗರಿಕ ವಿಭಾಗ ತೆರೆಯಲಾಗಿದೆ ಎನ್ನುತ್ತಾನೆ. ಪುನಃ ಅರ್ಜಿದಾರರು ಇಲಾಖೆಯಿಂದ ಇಲಾಖೆಗೆ ಅಲೆಯುವುದು ಪ್ರಾರಂಭವಾದೊಡನೆ ಮಹಿಳೆಯರು ಸಿಟ್ಟಿಗೇಳುತ್ತಾರೆ. ವಾಟನಬಿ ಎಲ್ಲೋ ಹೋಗಿರುವ ಕಾರಣ ಲಿಖಿತ ದೂರು ಕೊಟ್ಟು ಹೋಗುವಂತೆ ಸಹಾಯಕ ಹೇಳುತ್ತಾನೆ. ಇದು ಮುಂದಿನ ಕತೆಗೆ ಮುಖ್ಯವಾದ ಘಟನೆ.

ಒಂದು ತಿಂಗಳು ಕಳೆದರೆ ೩೦ ವರ್ಷ ಸೇವೆ ಸಲ್ಲಿಸಿದಂತಾಗುವ ವಾಟನಬಿ ಈವರೆಗೆ ಒಂದು ದಿನ ಕೂಡಾ ರಜೆ ತೆಗೆದುಕೊಂಡವನಲ್ಲ. "ಇವನೊಬ್ಬ ಜೀವಂತ ಹೆಣ! ಈತ ಸತ್ತು ಈಗಾಗಲೇ ೨೫ ವರ್ಷಗಳು ಕಳೆದುಹೋಗಿದೆ. ಮೊದಮೊದಲು ಇವನಲ್ಲೂ ಸ್ವಲ್ಪ ಜೀವಂತಿಕೆ ಲವಲವಿಕೆ ಇತ್ತು."–ನಿರೂಪಕ ಹೇಳುತ್ತಾನೆ.

ಡಾಕ್ಟರ್ ತಿಳಿಸದೇ ಇದ್ದರೂ ತನಗೆ ಕ್ಯಾನ್ಸರ್ ಇದೆಯೆಂಬ ಅನುಮಾನ ವಾಟನಬಿಗೆ ಇದೆ. "ಇದಕ್ಕೆ ಮುಕ್ತಾಯ ಕಾಣಿಸಿಬಿಡಬೇಕೆಂದು ನಾನು ಯೋಚಿಸಿದೆ. ಆದ್ರೆ ಸಾಯೋದು ಬಹಳಾ ಕಷ್ಟ. ಮತ್ತೆ, ನನ್ಗೆ ಈಗ್ಲೇ ಸಾಯೋಕೆ ಇಷ್ಟವಿಲ್ಲ, ಇಷ್ಟು ವರ್ಷಗಳಿಂದ ನಾನು ಯಾತಕ್ಕಾಗಿ ಬದುಕಿದೀನಿ ಅನ್ನೋದು ನನ್ಗೆ ಗೊತ್ತಿಲ್ಲ" ವಾಟನಬಿಯ ಮಾತು.

ಕೂಡಿಟ್ಟ ಹಣ ೧೮೦ ಸಾವಿರ ಯೆನ್‌ಗಳಲ್ಲಿ ೫೦ ಸಾವಿರ ಯೆನ್‌ಗಳನ್ನೂ ವಾಟನಬಿ ಬ್ಯಾಂಕ್‌ನಿಂದ ತೆಗೆದುಕೊಂಡಿದ್ದಾನೆ. ತನಗೆ ಕ್ಯಾನ್ಸರ್ ಇದೆಯೆಂದು ಗೊತ್ತಾದ ನಂತರ ಕುಡಿಯಲು ಶುರು ಮಾಡಿದ್ದಾನೆ. ಒಮ್ಮೆ ಮಧುಶಾಲೆಯೊಂದ ರಲ್ಲಿ ಲೇಖಕನೊಬ್ಬ ವಾಟನಬಿಗೆ ಹೇಳುವ ಮಾತನ್ನು ಗಮನಿಸಿ :

"ನಿಮಗಿರೋ ಕ್ಯಾನ್ಸರ್ ನೀವು ಜೀವನವನ್ನು ಅನುಭವಿಸೋ ಹಾಗೆ ಪ್ರೇರೇ ಪಿಸಿತು. ಮನುಷ್ಯ ಒಬ್ಬ ಮಹಾ ಮೂರ್ಖ. ತಾನಿನ್ನೇನು ಎಲ್ಲವನ್ನೂ ತ್ಯಜಿಸಿ

ಹೋಗಬೇಕಾಗಿ ಬಂದಾಗ ಜೀವನ ಎಷ್ಟೊಂದು ಸುಂದರವಾಗಿದೆ ಎಂಬ ಸತ್ಯವನ್ನು ಕಂಡುಕೊಳ್ತಾನೆ. ನೀವು ನಿಜಕ್ಕೂ ದೊಡ್ಡ ವ್ಯಕ್ತಿ. ಸಾವಿನ ಜೊತೆ ಹೋರಾಡ್ತಿದೀರಿ. ಈ ಸದ್ಯದ ಕ್ಷಣವವರೆಗೆ ನೀವು ಜೀವನದ ಗುಲಾಮರಾಗಿದ್ರಿ. ಆದ್ರೆ ಈಗ ಜೀವನದ ಯಜಮಾನರಾಗ್ತೀರಿ. ಮತ್ತೆ ಜೀವನವನ್ನು ಅನುಭವಿಸೋದು ಮನುಷ್ಯನ ಕರ್ತವ್ಯ. ಅನುಭವಿಸದೇ ಇರೋದು ಪ್ರಕೃತಿಗೆ ವಿರುದ್ಧವಾದದ್ದು. ಮನುಷ್ಯನಿಗೆ ಯಾವಾಗಲೂ ಬದುಕಿನ ಬಗ್ಗೆ ಲಾಲಸೆ ಇರ್ಬೇಕು. ಈ ಲಾಲಸೆ ಇರಬಾರದು ಅದು ಅನೀತಿ ಅಂತಾ ಕಾಲಾನುಕಾಲದಿಂದ ನಮಗೆ ಹೇಳಿಕೊಂಡು ಬಂದಿದ್ದಾರೆ. ಆದರೆ ಈ ಅಭಿಪ್ರಾಯ ತಪ್ಪು. ಜೀವನದ ಬಗ್ಗೆ ಲಾಲಸೆ ಇಟ್ಕೊಳೋದ ಕೂಡಾ ಸದ್ಗುಣವೇ" ಕುರೋಸವ ಕೃತಿಯ ಹುಟ್ಟಿನ ಬಗ್ಗೆ ಹೇಳಿದ ಮಾತುಗಳು ಇಲ್ಲಿ ಇಣುಕಿದೆ.

ಟೋಯೋ ಎಂಬ ಹೆಂಗಸಿನತ್ತ ವಾಟನಬಿ ಆಕರ್ಷಿತನಾಗಿದ್ದಾನೆ. ಅವಳೊಂದಿಗೆ ಡುಡತೊಡಗಿದ್ದಾನೆ. ಎಂದೆಂದೂ ಮನೆಬಿಟ್ಟು ಉಳಿಯದಿದ್ದವನು ಉಳಿಯತೊಡಗಿದ್ದಾನೆ. ನಿರೂಪಕ ಹೇಳುತ್ತಾನೆ : ನಮ್ಮ ಕಥಾನಾಯಕ ಎರಡು ವಾರಗಳಿಂದ ಕಛೇರಿಗೆ ಗೈರು ಹಾಜರಾಗಿರುವನು. ಈ ಅವಧಿಯಲ್ಲಿ ಅನೇಕ ಊಹಾಪೋಹಗಳು, ವದಂತಿಗಳು ಪುನರಾವರ್ತಿತವಾಗಿರುವುದು ಸ್ವಾಭಾವಿಕ. ಈ ಎಲ್ಲ ವದಂತಿಗಳೂ ಒಂದು ತೀರ್ಮಾನಕ್ಕೆ ಬಾದಿವೆ—ಅದೇನೆಂದರೆ ವಾಟನಬಿ ಒಬ್ಬ ಅವಿವೇಕಿಯ ರೀತಿಯಲ್ಲಿ ವರ್ತಿಸುತ್ತಿರುವನೆಂದು ಇಷ್ಟಾದರೂ ವಾಟನಬಿಗೆ ಅವೇ ನಡವಳಿಕೆಗಳು ಅವನ ಜೀವಿತದ ಅರ್ಥಪೂರ್ಣವಾದ ಮಹತ್ವದ ಕ್ರಿಯೆಗಳಾಗಿವೆ."

ಕುರೋ–ಚೋದ ಮಹಿಳೆಯರು ಕೊಟ್ಟ ಅರ್ಜಿಯ ಬಗೆಗೆ ವಾಟನಬಿ ಕೆಲಸ ಮಾಡುತ್ತಾನೆ. ಅನೇಕ ತೊಡಕುಗಳನ್ನು, ಸಮಸ್ಯೆಗಳನ್ನು ಎದುರಿಸುತ್ತಾನೆ. "ನಾವು ದೃಢ ಸಂಕಲ್ಪ ಮಾಡಿದರೆ ಕಷ್ಟವೂ ಆಗೋಲ್ಲ"—ವಾಟನಬಿಯ ಮಾತಿದು. ಕೈಗೆತ್ತಿಕೊಂಡಿರುವ ಕೆಲಸದಲ್ಲಿ ಅಪಾರ ಶ್ರದ್ಧೆ ವಹಿಸುತ್ತಾನೆ. ೫ ತಿಂಗಳ ನಂತರ ನಿಧನನಾಗುತ್ತಾನೆ.

ಕುರೋ-ಚೋದ ಕೊಳಚೆ ಪ್ರದೇಶ ಈಗ ಸುಂದರ ಪಾರ್ಕ್ ಆಗಿದೆ. ಮೇಯರ್ ಮತ್ತು ಪಾರ್ಕ್ ವಿಭಾಗದವರು ಇಂಥಾ ಒಳ್ಳೆಯ ಕೆಲಸ ಮಾಡಿದ್ದು ತಾವು ಎಂದೂ, ಇದರ ಕೀರ್ತಿ ತಮಗೇ ಎಂದೂ ಬೀಗುತ್ತಾರೆ.

ಸುಮಾರು ೨೫ ವರ್ಷಗಳು ಸತ್ತಂತೆ ಬದುಕಿದ ವಾಟನಬಿ ತನಗೆ ಕ್ಯಾನ್ಸರ್ ಇದೆಯೆಂದು ತಿಳಿದ ನಂತರವೇ ಕ್ರಿಯಾಶೀಲನಾಗುತ್ತಾನೆ. ಜೀವನ ಬಲು ಕ್ಷಣಿಕ ಅನಿಸುವುದೂ ಆಗಲೇ. ಹೆಂಡತಿಯನ್ನು ಹಿಂದೆಯೇ ಕಳೆದುಕೊಂಡ ಆತ ಇದ್ದಕ್ಕಿದ್ದಂತೆ ಟೋಯೋಳನ್ನು ತನ್ನ ಸಂಗಾತಿಯನ್ನಾಗಿ ಮಾಡಿಕೊಳ್ಳುವುದು ಅವನು ಜೀವಿಸ

ತೊಡಗಿದ್ದರಿಂದ! ಕೆಟ್ಟದಾದರೂ ಬದುಕಿಗೆ ಮೋಜೆನಿಸುವ ಮುದ ಕೊಡುವ ಕುಡಿತ, ಜೂಜು, ಹೆಣ್ಣು ವಾಟನಬೆಯ ಬದುಕಿನಲ್ಲಿ ಪ್ರಾರಂಭವಾಗುವುದು ವಿಚಿತ್ರ. ಬದುಕನ್ನು ಕಂಡುಕೊಂಡಿದ್ದು ಕೇವಲ ಮೋಜಿನಲ್ಲಿಲ್ಲ. ಕೆಲಸ ಮಾಡಬೇಕೆನ್ನುವ ದೃಢ ಸಂಕಲ್ಪದಲ್ಲಿ.

ಅರ್ಥವೇ ಇಲ್ಲದ ಬದುಕನ್ನು ವಾಟನಬೆ ಅರ್ಥಪೂರ್ಣವಾಗಿ ಬದುಕುತ್ತಾನೆ. ಅವನ ಬದುಕಿನಲ್ಲಿ ಉಂಟಾಗುವ ಬದಲಾವಣೆಗಳು ಗಮನಾರ್ಹ. ಸಂಭಾಷಣೆಯ ಮೊನಚು, ವ್ಯಂಗ್ಯ ಗಂಭೀರತೆ ಗಮನ ಸೆಳೆಯುತ್ತದೆ. ಒಬ್ಬ ವ್ಯಕ್ತಿಯ ಬದುಕನ್ನು ಈ ಕೃತಿ ಅರ್ಥೈಸುತ್ತದೆ. ನಮ್ಮೆಲ್ಲರ ಬದುಕಿನ ಉದ್ದೇಶದತ್ತ ಯೋಚಿಸುವಂತೆ ಮಾಡುತ್ತದೆ. ಬದುಕಿಗೆ ಅರ್ಥವಿದೆಯೇ ಎಂಬುದು ಮೂರ್ಖ ಪ್ರಶ್ನೆ. ಅರ್ಥಪೂರ್ಣವಾಗಿ ಬದುಕುವುದು ಮನುಷ್ಯನ ಕೆಲಸ. ವಾಟನಬೆ ಅದಕ್ಕೆ ಉದಾಹರಣೆ.

''ಇಕಿರು'' (ಜಪಾನಿ ಚಿತ್ರ ನಿರ್ದೇಶಕ ಅಕಿರ ಕುರೋಸವರ ಪ್ರಸಿದ್ಧ ಚಿತ್ರಕಥೆ ಅನುವಾದ: ಕೃಷ್ಣ ಹಾಸನ, ಅಕ್ಷರ ಪ್ರಕಾಶನ, ಹೆಗ್ಗೋಡು, ಸಾಗರ, ಕರ್ನಾಟಕ. / ಪುಟಗಳು ೭೨/ ಬೆಲೆ-೧೦ರೂ.

---

## ಕಾವ್ಯಜೀವಿ ಅವರ 'ಆರೋಹಣ'

ಕಾವ್ಯಜೀವಿ ಅವರ 'ಆರೋಹಣ' ಕವನ ಸಂಕಲನದಲ್ಲಿ ಮೂವತ್ತೊಂದು ಕವಿತೆಗಳು ಜೊತೆಗೆ ಹಲವಾರು ಹನಿಗವಿತೆಗಳು ಸೇರಿಕೊಂಡಿವೆ. ಇದು ಇವರ ಮೂರನೆಯ ಕವನ ಸಂಕಲನ. ಎರಡು ಸಂಕಲನ ತಂದಿರುವ ಕವಿಯೊಬ್ಬ ತನ್ನ ಮೂರನೆಯ ಸಂಕಲನದಲ್ಲಿ ತೋರಬೇಕಾದ ಶ್ರದ್ಧೆ ಮತ್ತು ಪ್ರೌಢಿಮೆಯನ್ನು ತೋರಿರುವುದು ಸಮಾಧಾನದ ಸಂಗತಿ. ತನ್ನೊಳಗೆ ಹುಟ್ಟುವ ಕವಿತೆಗೆ ಬಾಹ್ಯ ಆಕೃತಿ ಕಟ್ಟುವ ಕಲೆಗಾರಿಕೆ ಇಲ್ಲಿನ ಬಹುತೇಕ ಕವಿತೆಗಳಲ್ಲಿ ಇಲ್ಲದಿದ್ದರೂ ಆರಿಸಿದ ಕೆಲವು ಕವಿತೆಗಳನ್ನು ಓದಿದಾಗ ಕಾವ್ಯ ಜೀವಿಯವರ ಕಾವ್ಯೋತ್ಸಾಹದ ಅರಿವು ಸಹೃದಯನಿಗೆ ಉಂಟಾಗುತ್ತದೆ, ಹಾಗಾಗಿ ನಾನು ಅಂತಹ ಒಂದೆರಡು ಒಳ್ಳೆಯ ಪದ್ಯಗಳ ಬಗ್ಗೆ ಕುತೂಹಲ ವ್ಯಕ್ತಪಡಿಸಲಿಚ್ಛಿಸುತ್ತೇನೆ.

ಮೊದಲನೇ ಕವಿತೆ 'ಬದುಕು'. ಬದುಕಿನ ನಿಷ್ಠುರತೆಯನ್ನು ಗೇಯಾತ್ಮಕ ಬಂಧದಲ್ಲಿ ಹಿಡಿದುಕೊಡುವ ಉತ್ತಮ ಕವಿತೆ. ಇದೇ ರೀತಿಯ ಲಯದಲ್ಲಿ ಮೂಡುವ ಕೆಳಗಿನ ಸಾಲುಗಳಲ್ಲಿ ಕಾವ್ಯಜೀವಿ ಯವರ ಪ್ರತಿಭೆ ಹೊಮ್ಮುತ್ತದೆ.

ಹಾಡುಗಳ ಹಿಂದೀಗ ಕಣ್ಣೀರ ಕಡಲುಂಟು
ಸವಿಗನಸುಗಳ ಸವಿಯ ಬಿಸಿ ಬೂದಿಯುಂಟು
ನನ್ನ ಹಾಡಿನ ಹಿಂದೆ ವಿಷ ಕುಡಿದ ಕೊರಳುಂಟು
ಮರುಳುಗಾಡಿನ ಪಥಿಕ ದಾಹವುಂಟು ! (ನೆನಪುಗಳು)

ದುಡಿಯುವವರ ಬೆವರಿನಲಿ ಅತ್ತರನು ಕೊಳ್ಳುತ್ತ
ಘಮಘಮಿಸುವರಿಗೆಲ್ಲ ದೀಪಾವಳಿ
ಅಸಹಾಯ ರಕ್ತದಲಿ ಓಕುಳಿಯನಾಡುತ್ತ
ತಿಲಕ ಹಚ್ಚುವರಿಗೆಲ್ಲ ದೀಪಾವಳಿ

'ರಾಗಗಳು' ಕವಿತೆಯಲ್ಲೂ ಇಂತಹ ಸಾಲುಗಳನ್ನು ಗಮನಿಸಬಹುದು. ಬೇಲಿಮೇಲಿನ ಬಟ್ಟೆ, ಹೀಗೊಂದು ಪತ್ರ, ಕವಿ ಕಣವಿ, ಅವರೋಹಣ, ಮಾತುಗಳ ಮಾತಲ್ಲ ಮುಂತಾದ ಕವಿತೆಗಳು ಸಹೃದಯರಿಗೆ ಆಪ್ಯವಾಗುತ್ತವೆ.

ಮೊದ ಮೊದಲಿನ ಕವಿತೆಗಳು ಪಡ್ಡೆ ಹುಡುಗರ ಪ್ರಣಯದಂತೆ—ಎದು ಹೇಳುವ ಮಟ್ಟದಿಂದ ಮುಂದೆ ಸಾಗಿ ಪ್ರೌಢನ ಗಾಢ ಪ್ರೇಮ ಮತ್ತು ಸಾಂದ್ರ ಅನುಭವಗಳ ಮಿಳಿತವನ್ನು ಸಾಧಿಸಿದಿದ್ದರೆ ಇವರ ಕಾವ್ಯ ನಿಜವಾಗಿಯೂ ನಿಶಿತ ಮತಿಯ ಕಾವ್ಯವೇ ಆಗುತ್ತಿತ್ತು.

'ಆರೋಹಣ' (ಕಾವ್ಯಜೀವಿ) ಸಹನಾ ಪ್ರಕಾಶನ, ಪದ್ಮಾಂಬ ನಿಲಯ, ಸಂಗೊಳ್ಳಿ ರಾಯಣ್ಣ ರಸ್ತೆ, ಶಿವಮೊಗ್ಗ-577201 ಪುಟ 43. ಬೆಲೆ 6/-ರೂ)

**—ಎಲ್. ಎಸ್. ಮುಕುಂದರಾಜ್**

---

## ಹರಯದ ಉತ್ಸಾಹದ 'ಓಕುಳಿ'

---

"ಓಕುಳಿ" ಎಚ್. ಎನ್. ಆರತಿಯ ಮೊದಲ ಕವನ ಸಂಕಲನ. ಇಲ್ಲಿನ ಬಹುತೇಕ ಕವನಗಳಲ್ಲಿ ವಯಸ್ಸಿಗನುಗುಣವಾದ ಯೌವನದ ಉತ್ಸಾಹ, ಆಕರ್ಷಣೆ ಕಾಣುತ್ತವೆ. ಪದಗಳ ಬಳಕೆಯಲ್ಲಿನ ಲಾಲಿತ್ಯತೆ ಹೆಚ್ಚು ಅರ್ಥವತ್ತಾಗಿವೆ. ಕವಿಯ ಮನದೊಳಗಣ ಯೋಚನೆ, ಭಾವಪೂರ್ಣ ಶಬ್ದಗಳಿಂದ ಅಭಿವ್ಯಕ್ತಗೊಂಡು, 'ತನ್ನತನ'ವನ್ನು ಶೋಧಿಸಿಕೊಳ್ಳುವ ಇರಾದೆ ಇಲ್ಲಿನ ಕವನಗಳಲ್ಲಿ ಕಾಣುತ್ತವೆ. ಹರೆಯದ ತುಡಿತಗಳೇ ಪದಗಳಾಗಿ-ಪದ್ಯಗಳಾಗಿ ಹೊರಹೊಮ್ಮಿದ ಭಾವನೆಗಳು ಹಲವು ಕವಿತೆಗಳಲ್ಲಿ ಕಾಣುತ್ತವೆ. (ಆಕರ್ಷಣೆ-ಛಿನ್ನಹ). ಜತೆ ಜತೆಯಲ್ಲೇ ಸುತ್ತಲ ಸಮಾಜವನ್ನು ಕಿರಿ ಓಡಿದು ನೋಡುವ ತವಕ, ಅಲ್ಲಿನ ಬೂಟಾಟಿಕೆಯಿಂದ ಬೇಸತ್ತ ಸೂಕ್ಷ್ಮತೆಯು ಕಿರುನೋಟವಿದೆ....... ನಡುನಡುವೆ/ಇಲ್ಲವಾದವರ ಗಟ್ಟಿ ಬೇಲಿ ಕಟ್ಟಿ/ ಒಳಗಿನವ ಹೊರಗಾಗಿಸಿದವರು (ಜಗತ್ತು) ಇರಬೇಕು ನೀನು ನಿತ್ಯ ಇಂಥವರ ನಡುವೆ ಜಾರದೇ. ಪಾರಾಗಬೇಕು/ಸೆಡವು ತೋರಬೇಕು....... (ಕಣ್ಣುಗಳ ಕಾಟ)

ವೈಯುಕ್ತಿಕ ದೈನಂದಿನ ಹಾಡು ಪಾಡುಗಳನ್ನು ಅಥವಾ ಮತ್ತೊಬ್ಬರಿಂದ ನಿವೇದಿಸಲ್ಪಟ್ಟ ವಿಚಾರಗಳನ್ನೇ 'ಕಾವ್ಯ'ವೆಂದು ನಿರೂಪಿಸಲಾಗದು. ವೈಯುಕ್ತಿಕ

ಸಂವೇದನೆಯನ್ನು ಸಾರ್ವತ್ರಿಕಗೊಳಿಸುವಲ್ಲಿ ಶಬ್ದ ಲಾಲಿತ್ಯವನ್ನು ಬಳಸಿದರೆ ಪದ್ಯಗಳು ಸಾರ್ಥಕವಾಗಬಹುದು, ಇಲ್ಲವೇ ಒಣಗಿದೆಲೆಗಳಾಗಿ ಬಿಡುವುವು. ವೈಯಕ್ತಿಕವಾಗಿ ಅನೇಕರ ಅನುಭವ ಅನ್ನಿಸಿಕೆಗಳೂ ಏಕತ್ರವಾಗಿ ಕಂಡರೂ ಭಾವಾಭಿವ್ಯಕ್ತಿಯ ನಿಟ್ಟಿನಲ್ಲಿ ಅನುಭವದ ಆಳ ವ್ಯತ್ಯಾಸವಾಗಬಹುದು-ವಿಸ್ತಾರವಾಗಬಹುದು. ಆಗ, 'ನಿರಂತರ', 'ಅನಂತ್ರರ' 'ರಾಗಕ್ಕೊಂದೇ ಹಗಲು'ಗಳಂಥ ಪದ್ಯಗಳು ಸ್ಫುರಿಸಬಹುದು.

ಸಹಜವಾಗಿ ಹರಯ ಬದುಕಿನ ಪರಿಳಿತಗಳನ್ನು ಕಾಣುತ್ತದೆ-ಬಯಸುತ್ತದೆ. ಹೊಸತನ್ನು ಆಶಿಸುತ್ತದೆ. ಆ ನಿಟ್ಟಿನಲ್ಲಿ ಕೆಲವು ಪದ್ಯಗಳು ತಮ್ಮ 'ಒಳಗ'ನ್ನು ನೀಡುತ್ತವೆ. ಈ ಸಂಪ್ರದಾಯಂದ ಬಾಳಿಸ ಮುರಿತ ಯಾವಾಗ ?/ ಕಣ್ಣಪಟ್ಟಿ ಕಿತ್ತೊಗೆದು ಎಲ್ಲ ನೋಡಿ..../ ('ಪರಪುಟ್ಟತನ')

ಬದುಕು ಇಷ್ಟು ವೇಗವಾಗಿದ್ದರೂ, ಪುರುಷ ಪ್ರಧಾನ ಸಮಾಜದಲ್ಲಿ ಹೆಣ್ಣು ಹೋರಾಟಕ್ಕಿಳಿದರೂ, ಇನ್ನೂ 'ಅಬಲೆ'ಯಾಗೇ ಕಾಣುತ್ತಾಳೆ. ಅವಳಲ್ಲಿನ ಅಸಹಾಯಕತೆ ಹಾಗೇ ಇದೆ ; ಇನ್ನೂ ಚೌಕಟ್ಟಿನ ಮಿತಿಯೊಳಗೇ ಬದುಕು ಸವೆಸುವವಳಾಗಿದ್ದಾಳೆ–ಎನ್ನುವುದಕ್ಕೆ ಪೂರಕವಾಗಿವೆ ಕೆಲ ಪದ್ಯಗಳು ; ಅಂತೇ ಹೆಣ್ಣಿನ ಮುನ್ನಡೆಗೆ, ಸ್ವಾತಂತ್ರಕ್ಕೆ ಉತ್ತರವೆನ್ನಿಸುವ ಪದ್ಯಗಳೂ ಇವೆ. (ಹಂಜರಿತ, ಅಬಲೆ, ಅದೇಹಾದಿ, ನಿರಂತರ.)

'ಓಕುಳಿ'ಯ ಕೆಲವು ಪದ್ಯಗಳು ಬಯಸಿದ ಕಾವ್ಯ ಕೊಡಲಾರದೇ ಹೋದರೂ ಭಾವನೆಗಳ ಅಭಿವ್ಯಕ್ತಿಯಲ್ಲಿ ತೀರಾ ಪೇಲವ ಅನಿಸದಿದ್ದರೂ, ಹೃದಯದ ಅಂತರಾಳದೊಳಗೇ ಇಣಕಿಕ್ಕುವ ಇಲ್ಲಿನ ಹಲವು ಸಾಲುಗಳಲ್ಲಿ ಸಂಕೀರ್ಣತೆಯಿಲ್ಲದಿದ್ದರೂ ನೆನಪುಗಳ ಪುಟ ತೆರೆಯುತ್ತವೆ.

(**'ಓಕುಳಿ' ಎಚ್. ಎನ್. ಆರತಿ**, ಸುಂದರ ಪ್ರಕಾಶನ,ಧಾರವಾಡ ಬೆಲೆ: 10ರೂ).

—**ಶೈಲೇಂದ್ರ ಬಂದಗದ್ದೆ**

## ಪುಸ್ತಕ ಸ್ವೀಕಾರ

- **ಆರ್ತಿ** (ಕಾದಂಬರಿ) : ರವಿ ಬೆಳಗೆರೆ, ಪುಟ : 107, ಬೆಲೆ-ರೂ. 15, ಸಿಂಚನ ಗ್ರಂಥಮಾಲೆ, ಮುಸ್ತಾಕ್ ಮಂಜಿಲ್, ಗೌಳಿಗಲ್ಲಿ, ಮಾಳಮಡ್ಡಿ, ಧಾರವಾಡ–7
- **ಅರ್ಧ ಸತ್ಯದ ಹುಡುಗಿ** (ಕವನ ಸಂಕಲನ) ; ಚಂದ್ರಶೇಖರ ಪಾಟೀಲ, ಪುಟ: 80, ಬೆಲೆ ರೂ. 15, ಸಂಕ್ರಮಣ ಪ್ರಕಾಶನ, ಧಾರವಾಡ–580008.
- **ನೂರು ಹನಿಗಳು** (ಮುಕ್ತಗಳು) : ಡಾ. ಬಸವರಾಜ ಸಬರದ. ಪುಟ : 100, ಗ್ರಿನೋಬಲ್ಸ್ ಪ್ರಕಾಶನ, ಗುಲಬರ್ಗಾ–585101.

- ಸೌಂದರ್ಯ ಲಹರೀ (ಸಂಸ್ಕೃತ ಮೂಲ : ಆದಿ ಶಂಕರಾಚಾರ್ಯ, ಅನು : "ಇಂಪು" (ಪುಟ್ಟು ಪ. ಕುಲಕರ್ಣಿ), ಪುಟ : 116, ಬೆಲೆ ರೂ. 20, ಪ್ರಜ್ಞಾ ಪ್ರಕಾಶನ, ಮೈದೂರು-581115. ತಾ॥ ರಾಣೆ ಬೆನ್ನೂರು.
- ತುಳುವರ ಆಚರಣೆಗಳಲ್ಲಿ ಕಲಾವಂತಿಕೆ, ಸಂ : ಕ. ವೆಂ. ರಾಜಗೋಪಾಲ, ಪುಟ : 152, ಬೆಲೆ ರೂ. 25.
- ಎಸ್. ಎನ್. ಸ್ವಾಮಿ (ಕಲೆ ಮತ್ತು ಜೀವನ) ಲೇ: ಎನ್. ಮರಿಶಾಮಾಚಾರ್, ಪುಟ : ?, ಬೆಲೆ ರೂ. 6.
- ವೈ. ನಾಗರಾಜು (ಕಲೆ ಮತ್ತು ಜೀವನ) ಲೇ : ಅ. ಲ. ನರಸಿಂಹನ್, ಪುಟ : ?, ಬೆಲೆ ರೂ. 6. (ಮೇಲಿನ ಮೂರೂ ಪುಸ್ತಕಗಳ ಪ್ರಕಾಶಕರು: ಕರ್ನಾಟಕ ಲಲಿತಕಲಾ ಅಕಾಡೆಮಿ, ಬೆಂಗಳೂರು-560 002).
- ಕಲಾವಿದರು–ಲೇ : ಎನ್. ಮರಿಶಾಮಾಚಾರ್, ಪುಟ 116, ಬೆಲೆ ರೂ. 25.
- ಸಾಹಿತ್ಯದಲ್ಲಿ ಚಿತ್ರಕಲೆ-ಲೇ : ಎನ್. ಮರಿಶಾಮಾಚಾರ್ ಪುಟ 92, ಬೆ ರೂ. 15
- ಶೃಂಗಾರ ಲಹರಿ– (ಕಲೆ-ಕಲಾವಿದರ ಲೇಖನ) ಪ್ರೊ॥ ಎಂ. ಎಚ್. ಕೃಷ್ಣಯ್ಯ, ಪುಟ: 160, ಬೆಲೆ ರೂ. 25. (ಈ ಮೇಲಿನ ಮೂರೂ ಪುಸ್ತಕಗಳ ಪ್ರಕಾಶಕರು: ಸ್ಮಿ ಎಂ. ಎನ್. ಪ್ರಕಾಶನ, 33, 1ನೇ ಕ್ರಾಸ್, ಸಂಪಂಗಿರಾಮನಗರ, ಬೆಂಗಳೂರು-560027).
- ಸುವರ್ಣ ಪುತ್ಥಳಿ- (ಕವನ ಸಂಕಲನ) ಕವಿ–ಗೋಪಾಲಕೃಷ್ಣ ಅಡಿಗ, ಪುಟ 70, ಬೆಲೆ ರೂ. 15, ಅಪರ್ಣ ಪ್ರಕಾಶನ, 43/48, 7ನೇ ಕ್ರಾಸ್, ವಸಂತನಗರ, ಬೆಂಗಳೂರು–560052.
- ಬದುಕು- (ವೈಚಾರಿಕ ಚಿಂತನೆ) ಲೇ-ಶ್ರೀ ಪಂಡಿತಾರಾಧ್ಯ ಶಿವಾಚಾರ್ಯ ಸ್ವಾಮಿಗಳು, ಪುಟ 207, ಬೆಲೆ ರೂ. 12, ತರಳಬಾಳು ಪ್ರಕಾಶನ, ಶ್ರೀ ತರಳ ಬಾಳು ಜಗದ್ಗುರು ಬೃಹನ್ಮಠ, ಸಿರಿಗೆರೆ–577541. ಚಿತ್ರದುರ್ಗ-ಜಿಲ್ಲೆ.
- ವಿಮರ್ಶಕರ ಕಣ್ಣಲ್ಲಿ ಬಣಕಾರರ ಮುದುಳಿಸಿದ್ಧ ಕಾವ್ಯ (ವಿಮರ್ಶೆ) ಸಂ: ನಾ. ಲೋಕೇಶ ಒಡೆಯರ್, ಪುಟ 120, ಬೆಲೆ ರೂ. 12, ಯುವ ಹಿರಿಯ ವಿದ್ಯಾರ್ಥಿ ಸಂಘ, ಎಂ. ಬಸವಯ್ಯ ವಸತಿ-ಮಹಾವಿದ್ಯಾಲಯ, ಸಿರಿಗೆರೆ–577541. ಚಿತ್ರದುರ್ಗ–ಜಿಲ್ಲೆ.
- ಬರಲು (ಕವನ ಸಂಕಲನ) ಕವಿ-ಟಿ.ಜಿ. ಭಟ್ ಹಾಸಣಗಿ, ಪುಟ 120, ಬೆಲೆ ರೂ. 20, ಆದಿತ್ಯ ಪ್ರಕಾಶನ, ಹಾಸಣಗಿ. ತಾ: ಯಲ್ಲಾಪುರ, ಜಿ: ಉ.ಕ.

o **ಭಗವದ್ಗೀತೆ**- (ವಿಚಾರ ಸಾಹಿತ್ಯ) ಲೇ-ಆರ್.ಡಿ. ಹೆಗಡೆ, ಪುಟ 98, ಬೆಲೆ ರೂ 15, ಆಲ್ಮನೆ ಪ್ರಕಾಶನ, ಕಾನಗೋಡು, ಸಿರ್ಸಿ-ತಾ, (ಉ.ಕ)-581340.

o **ನೆಲ್ಸನ್ ಮಂಡೇಲಾ**- (ಮಂಡೇಲಾ ಬದುಕು-ಹೋರಾಟ) ಲೇ : ರಮಜಾನ ದರ್ಗಾ, ಪುಟ 108, ಬೆಲೆ ರೂ. 12, ಕರ್ನಾಟಕ ದಲಿತ ಸಂಘರ್ಷ ಸಮಿತಿ, ಕೋಲಾರ ಜಿಲ್ಲಾ ಶಾಖೆ, ಕೋಲಾರ.

o **ಕವಿರಾಜಮಾರ್ಗದ ಧ್ವನಿಯೆಂಬುದಳಂಕಾರಂ**-(ಧ್ವನ್ಯಲಂಕಾರವಾದ) ಸಂ : ಬಂ. ಕೃಷ್ಣಶರ್ಮ, ಪುಟ 136, ಬೆಲೆ ರೂ. 15, ಪ್ರಸಾದ ಪ್ರಕಾಶನ, 3, ಶ್ರೀ ಸುಬ್ರಹ್ಮಣ್ಯ ಸ್ವಾಮಿ ಮಂದಿರಂ, ವಿಶ್ವೇಶ್ವರಪುರಂ, ಬೆಂ–560 004.

o **ಮಾತೃಭಾಷೆ : ತತ್ವ ಮತ್ತು ಬೋಧನಾ ಮಾರ್ಗ**- (ಶೈಕ್ಷಣಿಕ ವಿಚಾರ) ಲೇ ಅನಸೂಯ ವಿ. ಪರಗಿ, ಪುಟ 254, ಬೆಲೆ ರೂ. 40, ಅನಸೂಯ ಪ್ರಕಾಶನ, ಪುರವರ–572175. ಮಧುಗಿರಿ-ತಾ.

o **ಸಾರ್ವತ್ರಿಕವೆಡೆಗೆ** (ವಿಮರ್ಶೆ ) ಲೇ : ಡಾ॥ ಬಿ. ಎನ್. ಸುಮಿತ್ರಾಬಾಯಿ, ಪುಟ 80, ಬೆಲೆ ರೂ. 10 ಮತ್ತು 20. ಮಾನವ ಪ್ರಕಾಶನ 2064/ಅ, ಉತ್ತರ ಬಡಾವಣೆ, ಹಾಸನ-573201.

o **ದೇಶೀಯರು** (ವಿವಿಧ ಕ್ಷೇತ್ರದವರ ಪರಿಚಯ) ಲೇ: ಎಸ್. ವೆಂಕಟ ವಿಶ್ವನಾಥ ಪುಟ 128, ಬೆಲೆ ರೂ. 25, ಪ್ರಜಾ ಸಾಹಿತ್ಯ ಪ್ರಕಾಶನ, 165, 14ನೇ ಅಡ್ಡ ರಸ್ತೆ, 1ನೇ ವಿಭಾಗ, ರಾಜಾಜಿನಗರ, ಬೆಂಗಳೂರು-560 010.

o **ದಾರಿಗೆ ಹೆಚ್ಚಿದ ದೀಪ**- (ಬಹುಮಾನಿತ ಕವನಗಳ ಸಂಕಲನ) ವಿದ್ಯಾರ್ಥಿಗಳು, ಸಂ : ಚಿ. ಶ್ರೀನಿವಾಸರಾಜು, ಪುಟ 48, ಬೆಲೆ ರೂ. 6.

o **ಬಹುಮಾನಿತ ಲೇಖನಗಳು**- (ಮೂವರು ವಿದ್ಯಾರ್ಥಿಗಳ ಪ್ರಬಂಧಗಳು) ಪುಟ 24, ಬೆಲೆ ? (ಮೇಲಿನ ಎರಡೂ ಪುಸ್ತಕಗಳ ಪ್ರಕಾಶಕರು : ಕನ್ನಡ ಸಂಘ, ಕ್ರೈಸ್ಟ್ ಕಾಲೇಜ್, ಬೆಂಗಳೂರು-560029.

o **ನಮ್ಮ ಸಿನಿಮಾ**- ಲೇ : ಜಿ. ಪಿ. ರಾಮಪ್ರಸಾದ್, ಪುಟ 36, ಬೆಲೆ ರೂ. 4, ಸಮಕ್ಷಮ ಪಬ್ಲಿಕೇಷನ್ಸ್, 5557, ಶಾಂತಿನಗರ, ತುಮಕೂರು-572102.

o **ಮಂದಾರ ಹೂವು**- (ಕಥಾ ಸಂಕಲನ) ಲೇ : ಡಾ॥ ಎಚ್. ಗಿರಿಜಮ್ಮ, ಪುಟ 148, ಬೆಲೆ ರೂ. 15, ಎಸ್. ಆರ್. ಪ್ರಕಾಶನ, ಬೆಂಗಳೂರು-560 053.

(ಪ್ರಿಯರೆ, ಪುಸ್ತಕ ಸ್ವೀಕಾರ-ವಿಮರ್ಶೆಗೆಂದು ಎರಡು ಪ್ರತಿಗಳನ್ನು ಕಳುಹಿಸಿಕೊಡಿ—ಸಂಪಾದಕ)

## ಯಾರು ಮಾಯೆ ?

ಬಾನು ಭುವಿಗೆ ನೀರುಣಿಸಿದರೆ
ಹಸಿರು ಚಿಗಿತು ಹೂ-ಹಣ್ಣುಗಳ ನೀಡುತ್ತದೆ ;
ಜೀವ-ಜೀವಗಳು ಮಿಲನವಾದರೆ
ಹೊಸ-ಜೀವಗಳು ಸೃಷ್ಟಿಯಾಗುತ್ತವೆ.
ಇದ ತಿಳಿದಿದ್ದೂ ಹಲ ಕೆಲವರು
ಹೆಣ್ಣೊಂದು ಮಾಯೆ
ಎಂದರು ಅದ್ಭುತವಾಗಿ !
ಅಂತೇ
ಹೀಗೆಲ್ಲ ಅಂದವರ ಜೀವಕ್ಕೆ
ನೀವೂ ಸಹ ಕಾರಣವಲ್ಲವೆ ?
ಜಗವೇ ಯೋಚಿಸಲಿ
ಈ ಯೋಗ್ಯರು ಹೇಳಿದ್ದು
ಅದೆಷ್ಟು ಯೋಗ್ಯವಾದುದೆಂದು ?

—ಶಂಕರಗೌಡ ಸಾತ್ಮಾರ

## ಜ್ವಾಲಾಮುಖಿಯ ಅಡಿಯಲ್ಲಿ

ಜ್ವಾಲಾಮುಖಿಯ ಮೇಲೆ
ಹಸಿರು ಸದಾ ಇರಲಿ ;
ಒಳಗೆ ಉರಿಯುತ್ತಿರಲಿ ; ಬೆಂಬಿಡದ ಬಯಕೆಗಳು
ಬಾಯುಗಲಿಸಿ ಕಾತರಿಸಿ ಕಿವಿ ನಿಮಿರಿಸಿ
ಎದ್ದೆದ್ದು ಕುಣಿವ ಲಾವಾರಸ
ಒಳಗೊಳಗೇ ಹರಿಯುತ್ತಿರಲಿ
ಇಂದು ನಾಳೆಗಳೆಂಬ ಮಂಪರ ನಿದ್ರೆಯಲಿ
ಮುಚ್ಚಿ ಬಿಡುತ್ತಿರುವ ಕಣ್ಣೆವೆಗಳ ಮೇಲಿನ
ಭಾರದ ರೆಪ್ಪೆ ಹಾಗೇ ಮಲಗಿರಲಿ
ಮತ್ತೆ ಹೀಗೆ ಮುಲುಗಿರಲಿ
ಜೀವ ; ಬೆಂದ ಭಾವ !

—ಡಾ|| ಎಸ್. ವಿ. ಪ್ರಭಾವತಿ

ANVESHANE MAG (5) PRB-DECL 127/85-86

'ಅನ್ವೇಷಣೆ' ಸಾಹಿತ್ಯ-ಸಾಂಸ್ಕೃತಿಕ ಚಟುವಟಿಕೆಗಳಿಗೆ ಮೀಸಲಾದ ಪತ್ರಿಕೆ

o ಅನುಭವದ ಆಳಕ್ಕೆ ; ಚಿಂತನೆಯ ವಿಸ್ತಾರಕ್ಕೆ

o ನವ್ಯೋತ್ತರ ಕನ್ನಡ ಸಾಹಿತ್ಯದ ಮಹತ್ವದ ದಾಖಲೆಗಳಿಗೆ

o ಸಾಹಿತ್ಯ: ರಂಗಭೂಮಿ, ಚಿತ್ರಕಲೆಗಳ ಸಮಕಾಲೀನ ಚಟುವಟಿಕೆಗಳ ದಾಖಲೆಗೆ

o ಪ್ರಗತಿಪರ ವಿಚಾರಗಳಿಗೆ, ಸೈದ್ಧಾಂತಿಕ ಹಿನ್ನೆಲೆಯ ಮುಕ್ತ ವಿಚಾರಗಳಿಗೆ

o ಹಿರಿ-ಕಿರಿ ಬರಹಗಾರರ ತಾತ್ವಿಕ ವಿಚಾರಗಳ ಸಂವಾದಕ್ಕೆ

ಚಂದಾ ವಿವರ : ವಾರ್ಷಿಕ ಚಂದಾ ರೂ. 35 (ವ್ಯಕ್ತಿಗಳಿಗೆ)
ರೂ. 50 (ಗ್ರಂಥಾಲಯಕ್ಕೆ)

ಅಜೀವ ಚಂದಾ ರೂ. 400 (ಒಂದು ಅಥವಾ ನಾಲ್ಕು ಕಂತು) ವ್ಯಕ್ತಿಗಳಿಗೆ
ರೂ. 500 ಸಂಸ್ಥೆ/ಗ್ರಂಥಾಲಯಕ್ಕೆ

ವಿಳಾಸ : ಸಂಪಾದಕ, "ಅನ್ವೇಷಣೆ", 478,
11ನೇ ಎಂ. ಸಿ. ಬಡಾವಣೆ ರಸ್ತೆ,
ವಿಜಯನಗರ, ಬೆಂಗಳೂರು-560040.

ಮುಂದಿನ ಸಂಚಿಕೆಯಲ್ಲಿ

ಡಾ॥ ಕೆ. ಕೇಶವ ಶರ್ಮ — ಎಚ್. ಆರ್. ಅಮರನಾಥ — ವಿನಯಾ ನಾಯಕ್ — ಮಲ್ಲೇಪುರಂ ಜಿ. ವೆಂಕಟೇಶ್ — ಎಸ್. ಜಿ. ಸಿದ್ದರಾಮಯ್ಯ — ಶ್ರೀಧರ ಪಿಸ್ಸೆ — ರವೀಂದ್ರಭಟ್ ಬಳಗುಳಿ — ಎಸ್. ಉಮಾ — ಎಂ. ಡಿ. ವಕ್ಕುಂದ - ಬಿ. ಚಿನ್ನಸ್ವಾಮಿ ಎಲ್. ಹನುಮಂತಯ್ಯ — ಜಿ. ಸುಬ್ರಾಯ ಭಟ್ ಬಕ್ಕಳ ಮುಂತಾದವರ ಬರಹಗಳು.

ಸಂಪಾದಕ/ಮುದ್ರಕ : ಆರ್. ಜಿ. ಹಳ್ಳಿ ನಾಗರಾಜ್, ಪ್ರಕಾಶಕರು : ಅರುಣ ಯುವ ಲೇಖಕರ ಬಳಗ, ಬೆಂಗಳೂರು-79. ಚೇತನ ಪ್ರಿಂಟರ್ಸ್, ಎಲ್. ಎನ್. ಪುರಂ, ಬೆಂಗಳೂರು-21